# ಹೊಯ್ಸಳ ಅರಸ ವಿಷ್ಣುವರ್ಧನನ ಕಾಲದ ದಂಡನಾಯಕರು ಮತ್ತು ಅವರ ಕೊಡುಗೆಗಳು ಒಂದು ಚಾರಿತ್ರಿಕ ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


ಸಂಶೋಧಕ

**ಸೋಮಣ್ಣ**
ನೋಂದಣಿ ಸಂಖ್ಯೆ : KRSMH-00370

ಮಾರ್ಗದರ್ಶಕರು
ಡಾ.ಶ್ರೀಕಂಠ





ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
2008–2009

626

# ಹೊಯ್ಸಳ ಅರಸ ವಿಷ್ಣುವರ್ಧನನ ಕಾಲದ ದಂಡನಾಯಕರು ಮತ್ತು ಅವರ ಕೊಡುಗೆಗಳು ಒಂದು ಚಾರಿತ್ರಿಕ ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)



ಸಂಶೋಧಕ

**ಸೋಮಣ್ಣ**

ನೋಂದಣಿ ಸಂಖ್ಯೆ : **KRSMH-00370**



ಮಾರ್ಗದರ್ಶಕರು

ಡಾ.ಶ್ರೀಕಂಠ



ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
**2008–2009**

626

## ಮಾರ್ಗದರ್ಶಕರ ಪ್ರಮಾಣ ಪತ್ರ

"ಹೊಯ್ಸಳ ಅರಸ ವಿಷ್ಣುವರ್ಧನನ ಕಾಲದ ದಂಡನಾಯಕರು ಮತ್ತು ಅವರ ಕೊಡುಗೆಗಳು-ಒಂದು ಚಾರಿತ್ರಿಕ ಅಧ್ಯಯನ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಗಾಗಿ ಸೋಮಣ್ಣ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ : 22.09.2009

(ಡಾ.ಶ್ರೀಕಂಠ ಎಂ.ಎ., ಪಿಹೆಚ್.ಡಿ)
ಇತಿಹಾಸ ಪ್ರಾಧ್ಯಾಪಕರು
ಮಹಾರಾಜ ಪ್ರಥಮ ದರ್ಜೆ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

# ಸಂಶೋಧಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನ ಕೇಂದ್ರದಲ್ಲಿ 2008–2009ನೇ ಸಾಲಿಗೆ ಇತಿಹಾಸ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನ ನಿಬಂಧವನ್ನು ರಚಿಸಲು "ಹೊಯ್ಸಳ ಅರಸ ವಿಷ್ಣುವರ್ಧನನ ಕಾಲದ ದಂಡನಾಯಕರು ಮತ್ತು ಅವರ ಕೊಡುಗೆಗಳು – ಒಂದು ಚಾರಿತ್ರಿಕ ಅಧ್ಯಯನ" ವಿಷಯವನ್ನು ಆಯ್ಕೆಮಾಡಿಕೊಂಡು ಡಾ.ಶ್ರೀಕಂಠ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಯನಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ: ಮಂಡ್ಯ

ದಿನಾಂಕ: 22.09.2009

Somay

(ಸೋಮಣ್ಣ)

ಸಂಶೋಧನಾ ವಿದ್ಯಾರ್ಥಿ

# ವಿಷಯಸೂಚಿ

# ಅಧ್ಯಾಯ 1

**ಪೀಠಿಕೆ**

ಹೊಯ್ಸಳರು ಕರ್ನಾಟಕದಲ್ಲಲ್ಲದೆ ದಕ್ಷಿಣ ಭಾರತದಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ರಾಜಕೀಯ, ಇತಿಹಾಸ, ಆಡಳಿತ, ಧರ್ಮ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಅವರ ಕೊಡುಗೆಗಳು ವಿಭಿನ್ನವಾಗಿವೆ ಮತ್ತು ಆಸಕ್ತಿ ದಾಯಕವಾಗಿವೆ. ದುರದೃಷ್ಟವಾಗಿ ಈ ಸಂತತಿಯು ಹೆಚ್ಚು ಕೆಲಸವನ್ನು ಮಾಡಲಿಲ್ಲ. ಹೊಯ್ಸಳ ಸಂತತಿಯು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಅವರ ಸಂತತಿಯನ್ನು ಮಹತ್ವಗೊಳಿಸಿದ ವಿಷ್ಣುವರ್ಧನ, ಇಮ್ಮಡಿ ಬಲ್ಲಾಳ, ಸೋಮೇಶ್ವರ, 3ನೇ ನರಸಿಂಹ ಮತ್ತು 3ನೇ ಬಲ್ಲಾಳನಂತಹ ಕೆಲವು ಸುಪ್ರಸಿದ್ಧ ರಾಜರುಗಳನ್ನು ಹೊಂದಲು ಒಳ್ಳೆಯ ಅದೃಷ್ಟವನ್ನು ಹೊಂದಿದೆ. ಹೊಯ್ಸಳರು ಕ್ರಿ.ಶ. 1000 ದಿಂದ 1346 ರವರೆಗೆ ಸುಮಾರು 350 ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ.

## 1.1 ಆಧಾರಗಳು

ಕರ್ನಾಟಕ ಇತಿಹಾಸದ ನಮ್ಮ ಜ್ಞಾನವು 20ನೇ ಶತಮಾನದ ಪ್ರಾರಂಭದಿಂದ ಅಸಾಮಾನ್ಯವಾಗಿ ಬೆಳೆದಿದೆ. ಹಲವು ಪ್ರಾಚ್ಯವಸ್ತು ಅವಶೇಷಗಳು ಮತ್ತು ಸಾಹಿತ್ಯಗಳು ಸಾಮಾನ್ಯವಾಗಿ ಕರ್ನಾಟಕದ ಇತಿಹಾಸ ವಿಶೇಷವಾಗಿ ಹೊಯ್ಸಳರ ಇತಿಹಾಸದ ಅಧ್ಯಯನ ಉದ್ದೇಶಕ್ಕೆ ಲಘು ಮಾಹಿತಿ ಆಧಾರಗಳಾಗಿವೆ.

ಈ ಉದ್ದೇಶಕ್ಕಾಗಿ ಪ್ರಸಿದ್ಧ ವಿದ್ವಾಂಸರು ಮತ್ತು ಕನ್ನಿಂಗ್‌ಹ್ಯಾಮ್, ಜೆ.ಎಸ್.ಫ್ಲೀಟ್ ಮತ್ತು ಬಿ.ಎಲ್.ರೈಸ್‌ರಂತಹ ಪಾಶ್ಚಾತ್ಯ ಶಾಸನ ಶಾಸ್ತ್ರಜ್ಞರಿಗೆ ಹೆಚ್ಚು ಗೌರವವನ್ನು ಕೊಡಬೇಕಾಗಿದೆ. ಡಾ.ಫ್ಲೀಟ್‌ರವರು ಬೊಂಬಾಯಿ ಪ್ರಾಂತ್ಯಕ್ಕೆ ಸೇರಿದ ಉತ್ತರ ಕರ್ನಾಟಕದಲ್ಲಿ ಹಲವು ಶಾಸನಗಳನ್ನು ಕ್ರಮವಾಗಿ ಸಂಗ್ರಹಿಸಲು ಮತ್ತು ಪ್ರಕಾಶಿಸಲು ಪ್ರಾರಂಭಿಸಿದರು.[1] ಬಿ.ಎಲ್.ರೈಸ್‌ರವರ ಎಪಿಗ್ರಾಫಿಯ ಕರ್ನಾಟಕದ 12 ಸಂಪುಟಗಳು ಮತ್ತು ಪ್ರಾಚ್ಯವಸ್ತುಶಾಸ್ತ್ರ ಇಲಾಖೆಯ ಇತರ ನಾಲ್ಕು ಸಂಪುಟ ಗಳನ್ನು (14–17 ಸಂಪುಟಗಳನ್ನು) ತರ್ಜುಮೆ ಮಾಡಲು ಮತ್ತು ಟಿಪ್ಪಣಿಗಳನ್ನು ರಚಿಸಲು ಮೈಸೂರು ಸರ್ಕಾರವು ಮುಂದೆ ಬಂದಿತು. ಶಾಸನಗಳ ಪಠ್ಯಭಾಗ ತರ್ಜುಮೆ ಮತ್ತು ಆಧಾರ ಮಾಹಿತಿಗಳ ಜೊತೆಯಲ್ಲಿ ಶಾಸನಗಳ ಪಠ್ಯಭಾಗವನ್ನು ಪ್ರಕಟಿಸಲಾಯಿತು. ಅವು ಹೊಯ್ಸಳರ ಕಾಲದ ಐತಿಹಾಸಿಕ ಪಟ್ಟಣಗಳು ಮತ್ತು ದೇವಾಲಯಗಳಿಗೆ ಹೆಚ್ಚುವರಿ ಮಾಹಿತಿಗಳನ್ನು ಸೇರಿಸಲ್ಪಟ್ಟಿವೆ.

ಮೈಸೂರು ವಿಶ್ವವಿದ್ಯಾನಿಲಯವು ಎಪಿಗ್ರಾಫಿಯ ಕರ್ನಾಟಕ ಶಾಸನಗಳನ್ನು ಮತ್ತು ಮೈಸೂರು ಪ್ರಾಚ್ಯವಸ್ತುಶಾಸ್ತ್ರ ವರದಿಗಳನ್ನು ಪರಿಷ್ಕರಿಸುವ ಮತ್ತು ಪುನರ್ ಸಂಪಾದನಾ

ಕಾರ್ಯವನ್ನು ತೆಗೆದುಕೊಂಡು 9 ಸಂಪುಟಗಳನ್ನು ಹೊರತಂದಿತು. ಜೊತೆಯಲ್ಲಿ 'ಎಪಿಗ್ರಾಫಿಯ ಇಂಡಿಕಾ', 'ಭಾರತೀಯ ಪ್ರಾಚೀನ ಅವಶೇಷಗಳು', 'ದಕ್ಷಿಣ ಭಾರತದ ಶಾಸನಗಳು' ಮತ್ತು ಹೈದರಾಬಾದ್ ಶಿಲಾಶಾಸನಗಳು ಬಹುಪಾಲು ಹೊಯ್ಸಳರ ಶಾಸನಗಳನ್ನು ಪ್ರಕಟಿಸಿತು.[2] ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯು ಬಾಂಬೆ-ಕರ್ನಾಟಕ ಪ್ರಾಂತ್ಯಗಳಿಗೆ ಸೇರಿದ ಕೆಲವು ಶಾಸನಗಳನ್ನು ಹೊಂದಿದೆ.

### 1.1.1 ಶಾಸನಾಧಾರಗಳು

ಅಧ್ಯಯನದ ವಿಷಯವು ಬಹುಪಾಲು ಹೊಯ್ಸಳ ಶಾಸನಗಳನ್ನು ಅವಲಂಬಿಸಿದೆ. ಒಟ್ಟಾರೆ 2000 ಶಾಸನಗಳಿವೆ. ಬಹುಪಾಲು ಶಾಸನಗಳು ಹಾಸನ, ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ದೊರೆತಿವೆ. ಆದರೆ ಇವುಗಳಲ್ಲಿ ಕೆಲವು ವಿರೂಪವಾಗಿವೆ ಮತ್ತು ಅಪೂರ್ಣವಾಗಿವೆ. ಅವುಗಳಲ್ಲಿ ಕೆಲವೇ ಕೆಲವು ಸಂಪೂರ್ಣವಾಗಿ ನಾಶವಾಗಿವೆ. ಶಾಸನಗಳು ಸ್ಪಷ್ಟ ಕಾವ್ಯ ಶೈಲಿಯಲ್ಲಿವೆ. ಅವು ಕಂದ, ವೃತ್ತ, ಚಂಪುದಂತಹ ಇತ್ಯಾದಿ ವಿವಿಧ ಬಂಧಗಳಲ್ಲಿ ರಚಿಸಲಾಗಿದೆ. ಅವುಗಳನ್ನು ತಾಮ್ರಪಟಗಳ ಮತ್ತು ಕಲ್ಲಿನ ಮೇಲೆ ಕೆತ್ತಲಾಗಿದೆ. ಕನ್ನಡ, ಸಂಸ್ಕೃತ, ತಮಿಳು ಭಾಷಾ ಬರಹದಲ್ಲಿದೆ.

ತೋರಿಕೆಗಾಗಿ ದಾನಶೀಲಾ ಅಥವಾ ಉದಾರಗಳ ಎಲ್ಲಾ ಬಗೆಯ ನೊಂದಣಿ ಕೊಡುಗೆಗಳ ಶಾಸನಗಳು ಆದರೆ ಒಂದು ಪೂರ್ಣ ಮತ್ತು ಎಚ್ಚರಿಕೆಯ ಅವುಗಳ ಅಧ್ಯಯನವು ಸಂಪೂರ್ಣ ಅಭಿವೃದ್ಧಿಯಲ್ಲಿ ರಾಜ್ಯದ ಚಟುವಟಿಕೆಗಳು ಮತ್ತು ಸಮಾಜದ ಬೆಳವಣಿಗೆಯನ್ನು ಬಹಿರಂಗ ಪಡಿಸುತ್ತದೆ. ಶಾಸನಗಳಿಂದ ನಾವು ಆಡಳಿತ ವ್ಯವಸ್ಥೆ ರಚನೆಯ ವಿವಿಧ ಮಂತ್ರಿಯ ಇಲಾಖೆಗಳ ದಾನಗಳ ಕಲ್ಪನೆ, ಚಾತುರ್ವರ್ಣ ವ್ಯವಸ್ಥೆಯ ಆಧಾರದ ಮೇಲೆ ಸಮಾಜದ ರಚನೆ, ಮತ್ತು ಅದರ ಚಲನೆ, 18 ಸಮಯಗಳು ಇತ್ಯಾದಿ ಮಾಹಿತಿಯನ್ನು ಪಡೆಯಬಹುದು.

ಉದಾಹರಣೆಗೆ ರಾಜರುಗಳು ನಾಲ್ಕು ವೇದಗಳ ಮಹಾನ್ ಕೊಡುಗೆಗಳನ್ನು ಮಾಡುವಲ್ಲಿ ತೊಡಗಿದ್ದರು.[3] ಹೊಯ್ಸಳ ಇಮ್ಮಡಿ ಬಲ್ಲಾಳನ ನೆರಲಿಗೆ ತಾಮ್ರಪಟವು ಬ್ರಾಹ್ಮಣರ ನೆಲೆ ಮತ್ತು ಕಲಿಕೆಯ ಅಭಿವೃದ್ಧಿಗೆ ಗುರಿಯಾಗಿದೆ.[4] ಅನ್ನದಾನ ಮತ್ತು ಸಂತರ್ಪಣ ಮಾಡುವ ಸಂಪ್ರದಾಯವು ಈ ಕಾಲದ ಪ್ರಮುಖ ವೈಶಿಷ್ಟ್ಯತೆ.[5]

ಹೊಯ್ಸಳ ಶಾಸನಗಳ ಈ ಅಧ್ಯಯನವೂ ಮೇಲಿನ ವಿಷಯಾಂಶಗಳನ್ನು ಬೆಳಕಿಗೆ ತರುವಲ್ಲಿ ನಮ್ಮ ಉದ್ದೇಶಕ್ಕೆ ವಿಶಾಲವಾದ ಉಪಯೋಗವಾಗಿದೆ. ಶಾಸನಗಳ ಕುರುಹುಗಳು ಕುಟುಂಬ, ವಂಶ, ವಿವಾಹ ಮತ್ತು ಹರಿಹರ ಆರಾಧನಾ ಪದ್ಧತಿಯಂತಹ ವಿವಿಧ ಶಬ್ದಗಳ ಕಲ್ಪನೆಯನ್ನು ವಿಶಾಲವಾಗಿ ಒದಗಿಸುತ್ತದೆ. ಅವು ಹೊಯ್ಸಳ ಸಮಾಜದ ಬೆಳವಣಿಯ

ಸಂಬಂಧದಲ್ಲಿ ರಾಜ್ಯ ಚಟುವಟಿಕೆಗಳ ಕ್ರಿಯಾತ್ಮಕ ಅಧ್ಯಯನವನ್ನು ಕೈಗೊಳ್ಳಲು ಅನುರೂಪವಾಗಿವೆ.

### 1.1.2 ಸ್ಮಾರಕಗಳು

ಸ್ಮಾರಕಗಳು ಹೊಯ್ಸಳ ರಾಜ್ಯದಲ್ಲೆಲ್ಲ ದೊರೆತಿವೆ. ಹೊಯ್ಸಳ ದೇವಾಲಯ ಶಿಲ್ಪಗಳು ಮಾರ್ಪಟ್ಟ ಮಾನವ ಕುಲಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಬಹಿರಂಗ ಪಡಿಸುತ್ತವೆ. ಉದಾಹರಣೆಗೆ ಚನ್ನರಾಯಪಟ್ಟಣ ತಾಲ್ಲೂಕಿನ ನುಗ್ಗೆಹಳ್ಳಿ 'ಲಕ್ಷ್ಮೀನಾರಾಯಣ ದೇವಾಲಯ'ದ ಹೊರಗೋಡೆಯ ಮೂರನೇ ಸಾಲು ಗೊಲ್ಲರ ನಿತ್ಯ ಜೀವನ ಕ್ರಮವನ್ನು ಹೇಳುತ್ತದೆ. 'ಸೋಮನಾಥಪುರ ದೇವಾಲಯ'ದ ಹೊರಗೋಡೆಯ ಮೂರನೇ ಸಾಲು ಸ್ಪಷ್ಟವಾಗಿ ಪುತ್ರ ಕಾಮೇಷ್ಠಿಯಾಗ, ದಶರಥ ರಾಜನ ಮಕ್ಕಳ ನಾಮಕರಣವನ್ನು ಹೇಳುತ್ತದೆ. ಬೇಲೂರಿನ ಕೇಶವ ದೇವಾಲಯದ ಚಿಕ್ಕ ಗೋಪುರಗಳ ನಾಲ್ಕು ಪಾರ್ಶ್ವಗಳ ಶಿಲ್ಪಗಳಲ್ಲಿ ಮಲ್ಲಯುದ್ಧದ ವಿವಿಧ ಭಂಗಿಗಳನ್ನು ಚಿತ್ರಿಸಲಾಗಿದೆ. ಅಮೃತಪುರ ದೇವಾಲಯದಲ್ಲಿ ಕೃಷ್ಣನ ತೊಟ್ಟಿಲು ತೂಗುವ ಸುಂದರ ಶಿಲ್ಪವು ಸುಂದರವಾಗಿ ಕೆತ್ತಲ್ಪಟ್ಟಿದೆ. ದೇವಾಲಯ ಶಿಲ್ಪಗಳ ಈ ಅಧ್ಯಯನವು ನಮಗೆ ಈ ಕಾಲದ ಸಮಾಜದಲ್ಲಿನ ಧಾರ್ಮಿಕ ಸಂಪ್ರದಾಯಗಳು ಮತ್ತು ಆಚರಣೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

### 1.1.3 ಸಾಹಿತ್ಯಾಧಾರಗಳು

ಪ್ರಾಚ್ಯವಸ್ತು ಆಧಾರಗಳಲ್ಲದೆ ಸಾಹಿತ್ಯಾಧಾರಗಳು ಹೊಯ್ಸಳ ಸಮಾಜದ ವಿಭಿನ್ನ ಚಟುವಟಿಕೆಗಳ ಅಧ್ಯಯನ ಉದ್ದೇಶಕ್ಕೆ ಮೌಲ್ಯಾಧಾರಿತ ಆಕರಗಳು. ಅವು ಐತಿಹಾಸಿಕ ಗುಣ ಲಕ್ಷಣಗಳ ಚಲನೆಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಚಿತ್ರಣವನ್ನು ಸಮರ್ಥಗೊಳಿಸಲು ಇತಿಹಾಸಕಾರರಿಗೆ ಆಗಿದೆ.[6] ಸಾಹಿತ್ಯಾಧಾರಗಳು ಸಮಕಾಲೀನ ಜನಜೀವನವನ್ನು ಪ್ರತಿಬಿಂಬಿಸುತ್ತವೆ. ಶಾಸನಗಳು ಆಗಾಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ಮಾತ್ರ ನಮಗೆ ಕೊಡುತ್ತದೆ, ಸಾಹಿತ್ಯವು ಆರ್ಥಿಕ, ಸಾಮಾಜಿಕ ಬೆಳಕು ಮತ್ತು ಸಾಂಸ್ಕೃತಿಕ ಅಲಂಕಾರ ಜೊತೆಯಲ್ಲಿ ಸಂಕ್ಷಿಪ್ತ ಮಾಹಿತಿಯನ್ನು ವಿಸ್ತಾರ ಗೊಳಿಸಲು ಸಹಾಯ ಮಾಡುತ್ತದೆ.[7] ಹೇಗಾದರೂ ಸಾಹಿತ್ಯ ಆಧಾರಗಳು, ಮುಖಮೌಲ್ಯವನ್ನು ತೆಗೆದುಕೊಳ್ಳಲಾಗುವುದಿಲ್ಲ. ಕೇವಲ ಊಹೆಗಳನ್ನು ಸಾಕ್ಷ್ಯವಾಗಿ ತೆಗೆದುಕೊಳ್ಳಬಹುದು.

ಹೊಯ್ಸಳ ಕಾಲವು ವಿಫುಲ ಸಾಹಿತ್ಯವನ್ನು ಸೃಷ್ಟಿಸಿದೆ. ಸಾಹಿತ್ಯಾಧಾರಗಳನ್ನು ಕನ್ನಡ ಮತ್ತು ಸಂಸ್ಕೃತ ಕೃತಿಗಳ ಎರಡು ವಿಭಾಗದಡಿಯಲ್ಲಿ ಅಧ್ಯಯನ ಸಾಧ್ಯವಾಗಿದೆ. ಮುಂದುವರೆದು ಕನ್ನಡ ಕೃತಿಗಳನ್ನು ಜೈನ, ಶೈವ ಮತ್ತು ವಚನ ಸಾಹಿತ್ಯದಡಿಯಲ್ಲಿ ಅಧ್ಯಯನ ಮಾಡಲು ಸಾಧ್ಯವಾಗಿದೆ.

## ಅ) ಸಂಸ್ಕೃತ ಸಾಹಿತ್ಯಗಳು

ಎರಡನೇ ವಿದ್ಯಾಚಕ್ರವರ್ತಿಯ ಗದ್ಯಕರ್ಣಮೃತವು ಒಂದು ಬಹುಮಟ್ಟಿನ ಐತಿಹಾಸಿಕ ಸಂಸ್ಕೃತ ಗದ್ಯ ವಿದ್ಯಾಚಕ್ರವರ್ತಿಯ ಸಂಪೂರ್ಣ ವಂಶವು ಹೊಯ್ಸಳರ ಕಾಲದಲ್ಲೇ ಜೀವಿಸಿತ್ತು. ಉದಾಹರಣೆಗೆ ಒಂದನೇ ವಿದ್ಯಾಚಕ್ರವರ್ತಿಯು ಇಮ್ಮಡಿ ಬಲ್ಲಾಳನಡಿಯಲ್ಲಿ, ವೈದ್ಯನಾಥನು ಇಮ್ಮಡಿ ನರಸಿಂಹನಡಿಯಲ್ಲಿ 2ನೇ ವಿದ್ಯಾಚಕ್ರವರ್ತಿಯು ಹೊಯ್ಸಳ ಸೋಮೇಶ್ವರನಡಿಯಲ್ಲಿ, ಕವಿ ವಾಸುದೇವನು ಹೊಯ್ಸಳ ರಾಮನಾಥ ಮತ್ತು ಮುಮ್ಮಡಿ ನರಸಿಂಹನ ಅಡಿಯಲ್ಲಿ ಹಾಗೂ ಮಹಾದೇವ ಅಥವಾ 3ನೇ ವಿದ್ಯಾಚಕ್ರವರ್ತಿಯು ಮುಮ್ಮಡಿ ಬಲ್ಲಾಳನಡಿಯಲ್ಲಿದ್ದ ಕವಿಗಳನ್ನು ಚೆನ್ನಾಗಿ ಉಲ್ಲೇಖಿಸಬಹುದು, ರುಕ್ಮಿಣಿ ಕಲ್ಯಾಣವು ಇವನ ಮತ್ತೊಂದು ಕೃತಿ. ಗದ್ಯಕರ್ಣಾಮೃತವು ಎರಡು ವಿಭಾಗಗಳಾಗಿ ನೋಡಬಹುದು. ಮೊದಲನೆಯದು ಐತಿಹಾಸಿಕ ಘಟನೆಗಳು ಚೆಹ್ನೆಯಾಗಿ ಪೂರ್ವಛಾಯೆ ಕಾಣುವ ದಂತಕತೆಗಳ ಪೂರ್ವಭಾವಿ ಸಾಹಿತ್ಯ ಮತ್ತು ಎರಡನೆಯದು ನಿಜವಾದ ಐತಿಹಾಸಿಕ ವಿವರಣೆ. ಶಿವದೇವನು 2ನೇ ನರಸಿಂಹನಾಗಿ ಮತ್ತು ಕಳಲದೇವಿಯು ಶಿವನ ಹೆಂಡತಿ ಪಾರ್ವತಿಯಾಗಿ ಪ್ರತಿನಿಧಿಸುತ್ತಾರೆ.[8]

## ಆ) ಕನ್ನಡ ಸಾಹಿತ್ಯಗಳು

ಈ ಕಾಲದಲ್ಲಿ ರಚನೆಯಾದ ಅಸಂಖ್ಯ ಸಾಹಿತ್ಯಗಳಲ್ಲಿ ಆಗಾಗ್ಗೆ ಹೊಯ್ಸಳ ಸಮಾಜದಲ್ಲಿ ನಡೆಯುವ ಚಟುವಟಿಕೆಗಳು ಮತ್ತು ಬದಲಾವಣೆಗಳನ್ನು ತೋರಿಸುವ ಕೆಲವು ಕನ್ನಡ ಸಾಹಿತ್ಯಗಳನ್ನು ಹೇಳಬಹುದು.

ರುದ್ರಭಟ್ಟನ 'ಜಗನಾಥ ವಿಜಯ' (ಸಂಕಲನ: ಡಾ.ಆರ್.ಶಾಮಶಾಸ್ತ್ರಿ) ವನ್ನು ಇಮ್ಮಡಿ ಬಲ್ಲಾಳನ ಕಾಲ ಕ್ರಿ.ಶ. 1180ರಲ್ಲಿ ಸಜ್ಜೆವಲ್ಲ ಚಂದ್ರಮೌಳಿಯನ್ನು ಮೆಚ್ಚಿಸಲು ರಚಿಸಲಾಯಿತು. ರುದ್ರಭಟ್ಟನು ಒಬ್ಬ ಬ್ರಾಹ್ಮಣ ಕವಿ ಜಗನಾಥ ವಿಜಯವು 18 ಸರ್ಗಗಳನ್ನು ಹೊಂದಿದೆ. ಇದು ಶ್ರೀಕೃಷ್ಣ ಕಥೆಯನ್ನು ಹೇಳುತ್ತದೆ. ದ್ವಿತಿಯಾರ್ಧ ಕಾವ್ಯವು ವೃತ್ತಿಗಳ, ಕ್ರೀಡೆ ಮತ್ತು ಆಟಗಳು ಹಾಗೂ ಲಜಹೋಮದಂತಹ ವಿವಾಹ ಆಚರಣೆಗಳನ್ನು ಹೇಳುತ್ತದೆ.[9]

ಜನ್ನನ ಅನಂತನಾಥ ಪುರಾಣವು ಜೈನ ಸಾಹಿತ್ಯದಲ್ಲಿಯೇ ಒಂದು ಮಹತ್ವದ ಕೃತಿ. ಕವಿ ಜನ್ನನನ್ನು ಹೊಯ್ಸಳ ಶಾಸನಗಳಲ್ಲಿ ಜನ್ನ, ಜನ್ನಯ್ಯ, ಮತ್ತು ಜನ್ನಿಗ ಎಂಬ ವಿವಿಧ ಹೆಸರುಗಳಲ್ಲಿ ಉಲ್ಲೇಖಿಸಲಾಗಿದೆ. ಅವನನ್ನು ಅವನ ಮಹಾನ್ ಪಾಂಡಿತ್ಯದ ಪ್ರಯುಕ್ತ 'ಕವಿಚಕ್ರವರ್ತಿ'ಯೆಂದು ಕರೆಯಲಾಗಿದೆ. ಈ ಕೃತಿಯು ಕನ್ನಡ ಅಧ್ಯಯನ ಸಂಸ್ಥೆಯ ದೇವಿರಪ್ಪ.ಎಚ್, ಪದ್ಮನಾಭ ಎಂ.ಸಿ ಅವರಿಂದ 1972ರಲ್ಲಿ ಸಂಪಾದಿಸಲ್ಪಟ್ಟಿತ್ತು. ಇದು 14 ತೀರ್ಥಂಕರರು, ಅನಂತ ಜಿನರ ಕಥೆಗಳನ್ನು ಹೇಳುತ್ತದೆ. ಈ ಕಾವ್ಯವು ಸಿದ್ಧಿಕಲ್ಪನೆಯಂತಹ ಕೆಲವು ಸಾಂಪ್ರದಾಯಿಕ ಧಾರ್ಮಿಕ ಕಾರ್ಯಗಳನ್ನು ಹೇಳುತ್ತದೆ.[10] ಈತನ 'ಯಶೋಧರ ಚರಿತ್ರೆ'

ಎಂಬ ಮತ್ತೊಂದು ಕೃತಿಯು ಅಹಿಂಸಾ ತತ್ವ ಬೋಧನೆಗಳು ಮತ್ತು ಜೀವದಯಷ್ಟಾಮಿನೋಂಪಿ ಆಚರಣೆಯನ್ನು ಸಮರ್ಥಿಸುತ್ತದೆ.

'ನೇಮಿನಾಥ ಪುರಾಣಂ' ಮತ್ತು 'ಲೀಲಾವತಿ ಪ್ರಬಂಧಂ' ಗಳು ನೇಮಿಚಂದ್ರನ ಎರಡು ಜೈನ ಕಾವ್ಯಗಳು. ಈ ಕವಿಯು ಇಮ್ಮಡಿ ಬಲ್ಲಾಳನ ಕಾಲದಲ್ಲಿ ಜೀವಿಸಿದ್ದನು. 'ನೇಮಿಚಂದ್ರ ಪುರಾಣಂ' ಅಥವಾ 'ಅರ್ಧನೇಮಿ'ಯು 22 ತೀರ್ಥಂಕರರ ಕಥೆಗಳನ್ನು ಹೇಳುತ್ತದೆ. ಈ ಕೃತಿಯು ಲೀಲಾವತಿ ರಾಜಕುಮಾರಿಯ ಶಿಕ್ಷಣದ ಬಗ್ಗೆ ಬೆಳಕು ಚೆಲ್ಲುತ್ತದೆ. ಲೀಲಾವತಿ ಪ್ರಬಂಧವು ನಿಜವಾದ ಪ್ರೇಮವು ಒಂದು ವ್ಯವಸ್ಥಿತ ವಿವಾಹವಾಗಿ ಬದಲಾವಣೆಗೊಂಡು ಕಥೆಯನ್ನು ಹೇಳುತ್ತದೆ. ಧಾರೆ ವೈವಾಹಿಕ ಶಾಸ್ತ್ರವು ಸಮಾಜದ ಸಾಮಾಜಿಕ ಸಂಪ್ರದಾಯದ ಭಾಗವೆಂದು ಹೇಳುತ್ತದೆ.[11]

ನಯಸೇನನ 'ಧರ್ಮಾಮೃತ' ಮಾಹಿತಿಗಳ ಒಂದು ಗಣಿಯಾಗಿದೆ. ಇವನು ಗದಗ ತಾಲ್ಲೂಕಿನ ಮುಳುಗುಂದದಲ್ಲಿ ನೆಲೆಸಿದ್ದ ಒಂದು ಪ್ರಖ್ಯಾತ ಭೋದಕ ಕುಟುಂಬಕ್ಕೆ ಸೇರಿದವನು, ಕಾವ್ಯವು ಚಂಪೂ ಶೈಲಿಯಲ್ಲಿ ಬರೆಯಲ್ಪಟ್ಟಿದೆ. 10ನೇ ಸರ್ಗವೂ ಹೆಚ್ಚು ಹೊಯ್ಸಳರ ಕಾಲಕ್ಕೆ ಗಮನಿಸಿ ವೇಶ್ಯೆಯರ ಶಿಕ್ಷಣವನ್ನು ಎತ್ತಿ ತೋರಿಸುತ್ತದೆ.[12]

ಹರಿಹರ, ರಾಘವಾಂಕರಂತಹ ವೀರಶೈವ ಕವಿಗಳು ಇದ್ದರು. ಕವಿ ಹರಿಹರನು ಒಂದನೇ ನರಸಿಂಹನ ಬಳಿ ಲೆಕ್ಕಿಕನಾಗಿ ಮೊದಲು ಸೇವೆ ಸಲ್ಲಿಸಿದ್ದನು. ಅನಂತರ ರಾಜಾಶ್ರಯವನ್ನು ಬದಿಗಿಟ್ಟು ಹಂಪಿಯಲ್ಲಿ ನೆಲೆಸಿದನು. ಹರಿಹರನ ಜೀವನ ಚರಿತ್ರೆಯು ವೀರಶೈವ, ಜೈನ, ಬ್ರಾಹ್ಮಣ, ವೈಷ್ಣವರಲ್ಲಿನ ಸಂಘರ್ಷಕ್ಕೆ ಸಾಕ್ಷಿಯಾಗಿದ್ದಾನೆ. ರಗಳೆಗಳು ಮತ್ತು ಗಿರಿಜಾ ಕಲ್ಯಾಣಕ್ಕೆ ಪ್ರಸಿದ್ಧ ಕವಿ. 'ಹರಿಹರನ ರಗಳೆಗಳನ್ನು ಪಿ.ಜಿ.ಹಳಕಟ್ಟಿಯವರು ಸಂಪಾದಿಸಿದ್ದಾರೆ. ವೈಜಕವ್ವೆ, ಅದಯ್ಯ, ಏಕಾಂತದ ರಮಿತಂದೆಯ ರಗಳೆಗಳಲ್ಲಿ ಜೈನರು ಮತ್ತು ಶೈವರ ನಡುವೆ ಧಾರ್ಮಿಕ ಘರ್ಷಣೆ ಬಗ್ಗೆ ಮಾಹಿತಿ ಕೊಡುವ ಆಧಾರವಾಗಿದೆ. ವೀರಶೈವರ ಸಾಮರ್ಥ್ಯವು ಚೆನ್ನಾಗಿ ಕವಿಯಿಂದ ಪ್ರಕಟವಾಯಿತು. ಬಸವರಾಜದೇವ ರಗಳೆಯು ಬಸವಣ್ಣನ ಕಥೆಯಾಗಿದೆ. ಗಿರಿಜಾ ಕಲ್ಯಾಣವು ಹಿಂದೂ ವಿವಾಹ ಪದ್ಧತಿಗಳ ಉದಾಹರಣೆಯಾಗಿದೆ.

ಹೊಯ್ಸಳ ಕಾಲದ ಪ್ರಸಿದ್ಧ ಕವಿ ರಾಘವಾಂಕ, ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ ಮತ್ತು ಸಿದ್ಧರಾಮಚರಿತೆ, ಇವನ ಪ್ರಮುಖ ಕೃತಿಗಳು. ಸೋಮನಾಥ ಚರಿತೆಯು ಜೈನ ಮತ್ತು ಶೈವರ ವಿವಾದವನ್ನು ವಿವರಿಸಿದರೆ ಸಿದ್ಧರಾಮ ಚರಿತೆಯು ಸಮಾಜ ಸುಧಾರಕ ಸಿದ್ಧರಾಮನ ಲೋಕೋಪಕಾರಿ ಚಟುವಟಿಕೆಯನ್ನು ಬಿಂಬಿಸುತ್ತದೆ. ಮತ್ತು ಹರಿಶ್ಚಂದ್ರ ಕಾವ್ಯವು ಹೊಯ್ಸಳ ಸಮಾಜದ ಸಾಮಾಜಿಕ ರಚನೆಗೆ ಸುಳಿವು ನೀಡುತ್ತದೆ.

ಬಿ.ಬಿ.ಹಾಂದಿಯವರು ಸಂಪಾದಿಸಿದ ಕೆರೆಯ ಪದ್ಮರಸನ ದೀಕ್ಷಾ ಬೋಧೆಯು ವೀರಶೈವ ಮತ್ತೊಂದು ಕೃತಿ. ಇದು ದೀಕ್ಷಾಮತ ಅಥವಾ ತತ್ವವನ್ನು ವಿದ್ಯಾರ್ಥಿಗಳಿಗೆ ಉಪದೇಶಕ ಚಿಂತಿಸಿದ್ದನ್ನು ಹೇಳುತ್ತದೆ. ಕವಿಯು ಸಮಾಜದ ಸಾಮಾಜಿಕ ಪಿಡುಗುಗಳನ್ನು ತೆರೆದಿಟ್ಟಿದ್ದಾನೆ.

1958ರಲ್ಲಿ ಧಾರವಾಡದ ಡಾ.ಆರ್.ಸಿ.ಹೀರೆಮಠರವರಿಂದ ಸಂಪಾದಿಸಲ್ಪಟ್ಟ ಸಂಪೂರ್ಣ ಪದ್ಮರಾಜ ಪುರಾಣವು ಶೈವ ಮತ್ತು ವೈಷ್ಣವರ ನಡುವೆ ಧಾರ್ಮಿಕ ಚರ್ಚೆಗಳು ಮತ್ತು ವಿವಾದಗಳು ಮತ್ತು ಅವರ ಪರಸ್ಪರ ದೇವರು ಶಿವ ಮತ್ತು ವಿಷ್ಣುವಿನ ಮಹತ್ವವನ್ನು ಎತ್ತಿ ಹಿಡಿಯುವ ಅಧ್ಯಯನಕ್ಕೆ ಒಂದು ಪ್ರಮುಖವಾದ ಆಧಾರವಾಗಿದೆ. ಕವಿ ಕೆರೆಯ ಪದ್ಮರಸನ ವಂಶದ ಸಾಲಿಗೆ ಸೇರಿದ ಸಂಪೂರ್ಣ ಪದ್ಮರಾಜ ಪುರಾಣದಲ್ಲಿ ಇಮ್ಮಡಿ ನರಸಿಂಹನ ಮಂತ್ರಿಯಾಗಿ ಮತ್ತು ಕವಿಯಾಗಿ ಕೆರೆಯ ಪದ್ಮರಸನ ಜೀವನ ಮತ್ತು ಸಾಧನೆಗಳನ್ನು ಚಿತ್ರಿಸಿದ್ದಾನೆ. ಉದಾಹರಣೆಗೆ 10ನೇ ಸರ್ಗವು ಕೆರೆಯ ಪದ್ಮರಸ ಮತ್ತು ತ್ರಿಭುವನ ತಾತರ ನಡುವೆ ಧಾರ್ಮಿಕ ವಿವಾದ ವಿಷ್ಣುವಿನ 10 ಅವತಾರವನ್ನು ಟೀಕೆಗಳು, ಶಿವನ ಪರಮಶ್ರೇಷ್ಟ ಮಹತ್ವವನ್ನು ಎತ್ತಿ ಹಿಡಿದದ್ದು ಮತ್ತು ತ್ರಿಭುವನ ತಾತನು ವೈಷ್ಣವದಿಂದ ಶೈವತ್ವಕ್ಕೆ ಮತಾಂತರವಾದುದನ್ನು ಬಹಿರಂಗ ಪಡಿಸುತ್ತದೆ.[13]

ಮಲ್ಲಿಕಾರ್ಜುನನ ಕಾವ್ಯಸಾರ ಅಥವಾ ಸುಕ್ತಿಸುದರ್ಣವಮ್ ಕನ್ನಡ ಕಾವ್ಯಗಳ ಯಥಾರ್ಥ ಕೋಶವಾಗಿದೆ. ಪ್ರತಿ ಸರ್ಗವ ಕೊನೆಯ ಉಲ್ಲೇಖಗಳ ಹೊಯ್ಸಳ ರಾಜ ಸೋಮೇಶ್ವರನನ್ನು ಮೆಚ್ಚಿಸಲು ರಚಿಸಿದನ್ನ ಬಹಿರಂಗ ಪಡಿಸುತ್ತದೆ. ಕವಿಯು ಹೊಯ್ಸಳರ ಕಾಲದ ಬೇಟೆಗಾರರ ಜೀವನ ನಿತ್ಯಕ್ರಮವನ್ನು ವರ್ಣಿಸಿದ್ದಾನೆ.

ವಚನ ಸಾಹಿತ್ಯವು ಸಮಾಜ ರಚನೆಯ ತುಂಬಾ ಹೀನವನ್ನು ವಿಶ್ಲೇಷಿಸಲು ಸಮಗ್ರವಾಗಿ ಉಪಯೋಗವಾಗಿದೆ. ಸಿರಿಗೆರೆ ಅಣ್ಣನ ಬಳಗದ ಅಂಗಡಿ ಎಸ್.ಎಮ್. ರವರಿಂದ, ಸಂಪಾದಿಸಿ ಮತ್ತು ತರ್ಜುಮೆ ಮಾಡಿದ 'ಬಸವಣ್ಣನ ವಚನಗಳು' ಕೆಲಸ ಉಪಾಸನೆ ಮೇಲೆ ಒತ್ತು ಮತ್ತು ಕಾಯಕವೇ ಕೈಲಾಸ ಕಲ್ಪನೆಯನ್ನು ಹೇಳುತ್ತದೆ. ಶಿವಶರಣೆಯರ ವಚನಗಳು ಸಮಾಜದ ದೌರ್ಬಲ್ಯವನ್ನು ಅಧ್ಯಯನ ಮಾಡಲು ಮಾಹಿತಿ ನೀಡಿದ ಮತ್ತೊಂದು ಆಧಾರವಾಗಿದೆ. ಕಾಳವ್ವೆ, ಕಡಿರೆ ರೇಮವ್ವೆ ಮತ್ತು ಅಮ್ಮಗೆ ರಾಯಮ್ಮರ ವಚನಗಳು ಚಾತುರ್ವರ್ಣ ವ್ಯವಸ್ಥೆಯ ಕಾಠಿಣ್ಯವನ್ನು ಪ್ರಕಟಿಸುತ್ತದೆ. ಅಮುಗೆ ರಾಯಮ್ಮ ಪವಿತ್ರ ಗ್ರಂಥಗಳ ಅಸತ್ಯಗಳು ಇತ್ಯಾದಿಗಳನ್ನು ಟೀಕಿಸಿ ವಿಸ್ತರಿಸಲು ಹೊರಟಿದ್ದಾಳೆ.

## 1.2 ಸಂಶೋಧನಾ ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಐತಿಹಾಸಿಕ ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳ ಲಾಗುವುದು. ಪ್ರಮುಖವಾಗಿ ಶಾಸನಗಳು ಮತ್ತು ಸಾಹಿತ್ಯಾಧಾರಗಳನ್ನು ಬಳಸಲಾಗುವುದು. ಮೇಲೆ ಹೇಳಲ್ಪಟ್ಟ ಕಾರ್ಯಕ್ಕೆ ಪ್ರಾಥಮಿಕ, ದ್ವಿತೀಯ ಆಕರಗಳ ಇತ್ತೀಚಿನ ಮಾಹಿತಿಗಳನ್ನು ಸಂಗ್ರಹಿಸ ಲಾಗುವುದು.

## 1.3 ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ಕರ್ನಾಟಕದಲ್ಲಿ ಐತಿಹಾಸಿಕ ಸಂಶೋಧನೆಯು ಇತ್ತೀಚಿನ ಕಾಲಗಳಲ್ಲಿ ವಿವಿಧ ದೃಷ್ಟಿ ಕೋನದಿಂದ ಅನುಸಂಧಾನ ಮಾಡಿದರು. ಕಳೆದ ಶತಮಾನದಲ್ಲಿ ಕರ್ನಾಟಕ ಇತಿಹಾಸದಲ್ಲಿ ಸಂಶೋಧನಾ ಕೆಲಸವು ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರಿಂದ ನಿಜವಾದ ಆಸಕ್ತಿಯಲ್ಲಿ ಪ್ರಾರಂಭವಾಯಿತು. ಪ್ರಾಂತೀಯ ರಾಜಕೀಯ ಇತಿಹಾಸದ ಮುಖ್ಯ ಅಂಶವನ್ನು ರಚಿಸುವ ದೃಷ್ಟಿಯಿಂದ ಶಾಸನಗಳನ್ನು ಮತ್ತು ಇತರ ಆಕರಗಳನ್ನು ಬೃಹತ್ ಪ್ರಮಾಣದಲ್ಲಿ ಸಂಗ್ರಹಿಸ ಲಾಯಿತು. ಏಕೆಂದರೆ ರಾಜಕೀಯ ಇತಿಹಾಸದ ಬಲವಾದ ಆಧಾರವಿಲ್ಲದೆ ಕರ್ನಾಟಕ ಇತಿಹಾಸದ ಬೇರೆ ವಿಷಯಗಳು ಅವುಗಳಲ್ಲಿ ನಿಜವಾದ ಯಥಾದೃಷ್ಟಿಗಳನ್ನು ಗ್ರಹಿಸುವುದು ಸಾಧ್ಯವಾಗಿರಲಿಲ್ಲ. ಈ ಪ್ರವೃತ್ತಿಯು 20ನೇ ಶತಮಾನದ ಮಧ್ಯ ಭಾಗದವರೆಗೂ ಮುಂದುವರೆದಿತ್ತು. ಕರ್ನಾಟಕದ ಸಾಂಸ್ಕೃತಿಕ ಕೊಡುಗೆಗಳನ್ನು ವಿಶೇಷವಾಗಿ ಕನ್ನಡ ಸಾಹಿತ್ಯ ಅಭಿವೃದ್ಧಿಯಲ್ಲಿ ಆಸಕ್ತಿ ತೋರಿದಂತಹ ವಿದ್ವಾಂಸರಿಂದ ಗಮನಿಸಲಾಯಿತು. ಇಷ್ಟಾದರೂ ಇತಿಹಾಸದ ಸೂಕ್ಷ್ಮ ಅಧ್ಯಯನಗಳಿಗೆ ಸರಿಯಾದ ಗಮನವನ್ನು ಕೊಡಲಿಲ್ಲ. ರಾಜಕೀಯ ಅಧ್ಯಯನವು ಈ ಗಮನವನ್ನು ಸ್ವೀಕರಿಸಿತು. ಆದರೆ ಹೊಯ್ಸಳರ ಆಳ್ವಿಕೆಯ ಕಾಲದ ದಂಡನಾಯಕರ ಅಧ್ಯಯನವನ್ನು ನಿರ್ಲಕ್ಷಿಸಲಾಯಿತು. ಅದನ್ನು ಪರಿಪೂರ್ಣಗೊಳಿಸುವುದೇ ಪ್ರಸ್ತುತ ಸಂಶೋಧನೆಯು ಉದ್ದೇಶವಾಗಿದೆ.

ಈ ಮೇಲಿನ ವಿಷಯವನ್ನು ಕ್ರಮವಾಗಿ ವಿವರಿಸಲು ರಾಜಪ್ರಭುತ್ವ ಸಂಸ್ಥೆಗಳು ಮಾದರಿ ಯಾಗಿವೆ. ದಂಡನಾಯಕರು ಆಡಳಿತದಲ್ಲಿ ಒಂದು ಪ್ರಮುಖವಾದ ಪಾತ್ರವನ್ನು ವಹಿಸಿದ್ದಾರೆ. ಅವರು ರಾಜನಿಗೆ ನಂಬಿಕಸ್ಥರಾಗಿದ್ದರು. ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ದಂಡನಾಯಕರು ಶಕ್ತಿಶಾಲಿ ಮಂತ್ರಿಗಳಾಗಿದ್ದು ಅವರು ರಾಜಕೀಯ ಶಕ್ತಿಗೆ ಸ್ಥಂಭಗಳಂತೆ ನಿಂತಿದ್ದರು.

ಈ ಅಧ್ಯಯನವು ಎಂಟು ಅಧ್ಯಾಯಗಳಲ್ಲಿ ವಿಭಾಗಿಸಲ್ಪಟ್ಟಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಸ್ವಭಾವ, ವ್ಯಾಪ್ತಿ ಮತ್ತು ಅದರ ಮೂಲಗಳಿಗೆ ಮತ್ತು ಹೊಯ್ಸಳ ವಂಶದ ರಾಜಕೀಯ ಇತಿಹಾಸದ ಸಂಕ್ಷಿಪ್ತ ಮುಖ್ಯಾಂಶಗಳಿಗೆ ಸಹ ಮೀಸಲಾಗಿದೆ.

ಎರಡನೆಯ ಅಧ್ಯಾಯವು ಹೊಯ್ಸಳರಸ ವಿಷ್ಣುವರ್ಧನನ ಆಳ್ವಿಕೆಯ ಬಗ್ಗೆ ತಿಳಿಸುತ್ತದೆ. ರಾಜಕೀಯ, ಆರ್ಥಿಕ, ಸಾಮಾಜಿಕ, ಶಿಕ್ಷಣ ಮತ್ತು ಸಾಹಿತ್ಯ, ಧರ್ಮ ಇವು ಎರಡನೆ ಅಧ್ಯಾಯದ ವಸ್ತು ವಿಷಯಗಳಾಗಿವೆ. ಅಲ್ಲದೆ, ಅಧಿಕಾರಶಾಹಿಗಳ ಬಗ್ಗೆ ರಾಜನ ಕಾರ್ಯಗಳು ಹೊಯ್ಸಳ ಸಾಮ್ರಾಜ್ಯ ಮತ್ತು ದಂಡನಾಯಕರ ಸ್ಥಾನಮಾನದ ಬಗ್ಗೆ ಸಹ ತಿಳಿಸುತ್ತದೆ.

ಮೂರನೆಯ ಅಧ್ಯಾಯವು ಹೊಯ್ಸಳ ಪ್ರಭು ವಿಷ್ಣುವರ್ಧನನ ಕಾಲದಲ್ಲಿ ದಂಡನಾಯಕರ ಮುಖ್ಯ ಕುಟುಂಬಗಳ ಬಗ್ಗೆ ತಿಳಿಸುತ್ತದೆ. ಸಾಮಂತ ಸೋಮನ ಕುಟುಂಬ, ಕಾಶಿಕಕುಳ್ಳ ಕುಟುಂಬ, ಮಹಾಸಾಮಂತ ದುಮ್ಮೇಯನಾಯಕನ ಕುಟುಂಬ ಮತ್ತು ಮರಿಯ ದಂಡನಾಯಕನ ಕುಟುಂಬ ಮತ್ತು ಈ ಅಧ್ಯಾಯುವು ಈ ಕಾಲದ ಮುಖ್ಯ ದಂಡನಾಯಕರ ಬಗ್ಗೆ ತಿಳಿಸುತ್ತದೆ.

ನಾಲ್ಕನೆಯ ಅಧ್ಯಾಯವು ಹೊಯ್ಸಳರ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿದ್ದ ಪ್ರಮುಖ ದಂಡನಾಯಕರ ಬಗ್ಗೆ ವಿವರಿಸಲಾಗಿದೆ.

ಐದನೆಯ ಅಧ್ಯಾಯವು ಹೊಯ್ಸಳ ಆಡಳಿತದಲ್ಲಿ ದಂಡನಾಯಕರ ಪಾತ್ರವನ್ನು ಮತ್ತು ದಂಡನಾಯಕರಿಗೂ ಮತ್ತು ರಾಜರಿಗೂ ನಡುವೆ ಇದ್ದ ಅಂತರ ರಾಜ್ಯ ಸಂಬಂಧದ ಬಗ್ಗೆಯೂ ತಿಳಿಸುತ್ತದೆ.

ಆರನೆಯ ಅಧ್ಯಾಯವು ಧರ್ಮಕ್ಕೆ ದಂಡನಾಯಕರ ಸಾಂಸ್ಕೃತಿಕ ಕೊಡುಗೆಯ ಬಗ್ಗೆ ವಿವರಿಸುತ್ತದೆ. ಅವರು ಶೈವ, ಜೈನ ಮತ್ತು ವೈಷ್ಣವ ದೇವಾಲಯಗಳಿಗೆ ಉದಾರವಾಗಿ ವಂತಿಗೆ ನೀಡಿದರು.

ಏಳನೇ ಅಧ್ಯಾಯದಲ್ಲಿ ಲಲಿತ ಕಲೆಗಳಿಗೆ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಮತ್ತು ಈಗ ಹೇಳಿದ ಕಾಲದ ದೇವಾಲಯ ಕಟ್ಟುವ ಚಟುವಟಿಕೆಗಳಿಗೆ ದಂಡನಾಯಕರ ಕೊಡುಗೆಯ ಬಗ್ಗೆಯೂ ವಿವರಗಳಿವೆ.

ಎಂಟನೆಯ ಅಧ್ಯಾಯವು ಅಧ್ಯಯನದ ನಂತರ ಹೊರಬೀಳುವ ಸಾಮಾನ್ಯ ತೀರ್ಮಾನಗಳ ಬಗ್ಗೆ ವಿವರಿಸುತ್ತದೆ ಮತ್ತು ಅಧ್ಯಯನ ನಡೆಸಿದ ಗ್ರಂಥ ವಿವರಣಪಟ್ಟಿ, ಭೂಪಠ ಮತ್ತು ವಂಶಾವಳಿಯ ವಿವರಣೆಗಳನ್ನು ಹೊಂದಿದೆ.

## 1.4 ಹೊಯ್ಸಳರ ಸಂಕ್ಷಿಪ್ತ ರಾಜಕೀಯ ಇತಿಹಾಸ

ಈ ಸಂತತಿಯ ಸ್ಥಾಪಕನಾದ ಹೊಯ್ಸಳನು ಕಾಲ್ಪನಿಕ ವ್ಯಕ್ತಿಯಾಗಿರಬೇಕೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದರು. ಆದರೆ ಕ್ರಿ.ಶ. 10ನೇ ಶತಮಾನದ ಕೊನೆಯ ಭಾಗದಿಂದ ಹೊಯ್ಸಳ ಎಂಬ ಹೆಸರು ಹಲವು ಶಾಸನಗಳಲ್ಲಿ ಕಂಡುಬರುತ್ತದೆ. ಹೊಯ್ಸಳ ಮಾರುಗ ಎಂಬುವನು ಗಂಗರೊಡನೆ ಸೇರಿ ನೊಳಂಬ ರಾಜನನ್ನು ಸೋಲಿಸಿದ ಸಂಗತಿಯು ಶಾಸನ ವೊಂದರಿಂದ ತಿಳಿದು ಬರುತ್ತದೆ. ಆದ್ದರಿಂದ ಪ್ರಾರಂಭದಲ್ಲಿ ಈ ಸಂತತಿಯು ಗಂಗರ ಮಾಂಡಲಿಕ ಮನೆತನವಾಗಿ ಮಲೆನಾಡಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಮಿಗಿಲಾಗಿ ಹೊಯ್ಸಳ ರಾಜರು ಗಂಗರ ಬಿರುದುಗಳಾದ ಪೆರ್ಮಾಡಿ, ವೀರಗಂಗ, ವಿಕ್ರಮಗಂಗ ಮತ್ತು ರಕ್ಕಸಗಂಗ ಮೊದಲಾದ ಬಿರುದುಗಳನ್ನು ಹೊಂದಿದ್ದರು. ಈ ಸಂಗತಿಯು ಗಂಗರಿಗೂ ಹೊಯ್ಸಳರಿಗೂ ಪ್ರಾರಂಭದಲ್ಲಿ ಇದ್ದ ಸಂಬಂಧವನ್ನು ಸೂಚಿಸುತ್ತದೆ. ಈ ಸಂತತಿಯ ಸ್ಥಾಪಕನಾದ ಹೊಯ್ಸಳನ ಶಾಸನಗಳಾವುವು ಇದುವರೆಗೆ ದೊರೆತಿಲ್ಲ. ಆದರೆ ಹೊಯ್ಸಳನು ಐತಿಹಾಸಿಕ ವ್ಯಕ್ತಿಯೆಂಬುದು ನಿರ್ವಿವಾದ ಸಂಗತಿ. ಅವನು 10ನೇ ಶತಮಾನದ ಕೊನೆಯಲ್ಲಿ ಪ್ರಾಮುಖ್ಯತೆ ಪಡೆದು ಕ್ರಿ.ಶ. 1006 ರವರೆಗೂ ಆಳ್ವಿಕೆ ನಡೆಸಿದನೆಂದು ತಿಳಿದು ಬರುತ್ತದೆ. ಕ್ರಿ.ಶ. 1006ರಲ್ಲಿ ಚೋಳ ದಂಡನಾಯಕನಾದ ಅಪ್ರಮೇಯನನ್ನು ತಿರುಮಕೂಡಲು ನರಸೀಪುರ ತಾಲ್ಲೂಕಿನ ಕೆಳಗೂರು ಗ್ರಾಮದಲ್ಲಿ ಎದುರಿಸಿ ಪರಾಜಿತನಾದ ಹೊಯ್ಸಳ ಮುಖ್ಯನು ಈ ಸಂತತಿಯ ರಾಜ್ಯ ಸ್ಥಾಪಕನಾದ ಹೊಯ್ಸಳನೆಂಬುದರಲ್ಲಿ ಸಂಶಯ ತೋರುವುದಿಲ್ಲ.

### ಒಂದನೇ ವಿನಯಾದಿತ್ಯ

ಹೊಯ್ಸಳನ ತರುವಾಯ ಒಂದನೇ ವಿನಯಾದಿತ್ಯನು ರಾಜನಾದನು. ಇವನು ಹೊಯ್ಸಳ ಮತ್ತು ಅವನ ಪತ್ನಿ ಭೂಮಿದೇವಿಯರ ಮಗ. ವಿನಯಾದಿತ್ಯನು ಕ್ರಿ.ಶ. 1022 ರವರೆಗೂ ಆಳಿದನು. ಇವನ ಆಳ್ವಿಕೆಯ ಪ್ರಾರಂಭದಲ್ಲೇ ಹೊಯ್ಸಳರಿಗೂ ಮತ್ತು ಚೋಳರಿಗೂ ಘರ್ಷಣೆಗಳು ನಡೆದವು ಎಂದು ಶಾಸನಗಳಿಂದ ತಿಳಿದು ಬರುತ್ತದೆ. ಉದಾಹರಣೆಗೆ 1006ರ ಕಲಿಯೂರು ಶಾಸನವನ್ನು ಹೆಸರಿಸಬಹುದು. ಈ ಕಾಳಗದಲ್ಲಿ ವಿನಯಾದಿತ್ಯನ ದಂಡನಾಯಕ ನಾಗಣ್ಣನೆಂಬುವನು ತನ್ನ ಪರಾಕ್ರಮವನ್ನು ಮೆರೆದನು. ವಿನಯಾದಿತ್ಯನು 1022ರಲ್ಲಿ ಮರಣ ಹೊಂದಿದನು.

### ನೃಪಕಾಮ

ಒಂದನೇ ವಿನಯಾದಿತ್ಯನ ಮಗನಾದ ನೃಪಕಾಮನು ತನ್ನ ತಂದೆಯ ಮರಣಾನಂತರ ಅಧಿಕಾರಕ್ಕೆ ಬಂದನು. ಇವನು 1047 ರವರೆಗೂ ಆಳ್ವಿಕೆ ನಡೆಸಿದನು. ನೃಪಕಾಮನನ್ನು 'ಕಾಮನೃಪ' ಎಂದು ಹಲವು ಶಾಸನಗಳಲ್ಲಿ ಹೆಸರಿಸಲಾಗಿದೆ. ಅಧಿಕಾರಕ್ಕೆ ಬಂದ ನಂತರ ರಾಜ್ಯ ವಿಸ್ತರಣೆಯಲ್ಲಿ ತೊಡಗಿದನು. ಮೊದಲಿಗೆ ಅವನು ಚೋಳ ಸಾಮಂತರಾಗಿದ್ದ

ಚೆಂಗಾಳ್ವರ ಮೇಲೆ ಯುದ್ಧ ಮಾಡಬೇಕಾಯಿತು. ಅನೇಕ ಬಾರಿ ಚೆಂಗಾಳ್ವರ ಮೇಲೆ ಹೋರಾಟ ಮಾಡಿದನು ಎಂದು ಶಾಸನಗಳು ತಿಳಿಸುತ್ತವೆ. ನೃಪಕಾಮನು ಚೆಂಗಾಳ್ವರನ್ನು ಸೋಲಿಸಿ ರಾಜ್ಯ ವಿಸ್ತರಿಸಿ 'ಮಹಾ ಮಂಡಲೇಶ್ವರ', 'ರಾಜಮಲ್ಲ ಪೆರ್ಮಾಡಿ' ಎಂಬ ಬಿರುದುಗಳನ್ನು ಧರಿಸಿದನು. 'ರಾಜಮಲ್ಲ ವೆರ್ಮಾಡಿ' ಎಂಬ ಬಿರುದು ಗಂಗ ಸಂತತಿಯ ಪ್ರಭುಗಳು ಹೊಂದಿದ್ದ ಬಿರುದಾಗಿದ್ದು ಇದು ತಲಕಾಡಿನ ಗಂಗರಿಗೂ ದೋರಸಮುದ್ರದ ಹೊಯ್ಸಳರಿಗೂ ಇದ್ದ ಸಂಬಂಧವನ್ನು ವ್ಯಕ್ತ ಪಡಿಸುತ್ತದೆ. ವಿಷ್ಣುವರ್ಧನನ ಪ್ರಸಿದ್ಧ ದಂಡನಾಯಕ ಮತ್ತು ಅಮಾತ್ಯನಾಗಿದ್ದ ಗಂಗರಾಜನ ತಾತ ಈಚಿಮಯ್ಯನು ನೃಪಕಾಮನ ಆಸ್ಥಾನದಲ್ಲಿ ಇದ್ದನು. ನೃಪಕಾಮನು 1047ರಲ್ಲಿ ಮರಣ ಹೊಂದಿದನು. ನೃಪಕಾಮನ ತರುವಾಯ ಅವನ ಮಗ ಇಮ್ಮಡಿ ವಿನಯಾದಿತ್ಯನು ರಾಜನಾದನು.

### ಇಮ್ಮಡಿ ವಿನಯಾದಿತ್ಯ (ಕ್ರಿ.ಶ. 1048-1100)

ಹೊಯ್ಸಳರ ಪ್ರಾರಂಭದ ರಾಜರಲ್ಲಿ ಸಮರ್ಥನಾದ ಇಮ್ಮಡಿ ವಿನಯಾದಿತ್ಯನು ತನ್ನ ಸ್ವಸಾಮರ್ಥ್ಯದಿಂದ ಹೊಯ್ಸಳರ ಪ್ರಾಬಲ್ಯವನ್ನು ವಿಸ್ತರಿಸಿದನು. ವಿನಯಾದಿತ್ಯನ ಕಾಲವನ್ನು ಹೊಯ್ಸಳರ ಶಕ್ತಿ ಸಂಘಟನೆ ಮತ್ತು ಸಂಚಯನದ ಕಾಲ ಎಂದು ಕರೆಯಲಾಗಿದೆ. ಇವನು ಚೋಳ ಮತ್ತು ಚಾಳುಕ್ಯರ ನಡುವಿನ ಕಾದಾಟದಿಂದ ಒದಗಿದ್ದ ಒಳ್ಳೆಯ ಅವಕಾಶವನ್ನು ಉಪಯೋಗಿಸಿ ಕೊಂಡು ರಾಜ್ಯ ವಿಸ್ತರಣೆಯಲ್ಲಿ ತೊಡಗಿದನು. ಸೈನ್ಯ ಬಲವನ್ನು ಹೆಚ್ಚಿಸಿಕೊಂಡು ಚಿಕ್ಕಮಗಳೂರು, ಹಾಸನ ಜಿಲ್ಲೆಗಳ ಮೇಲೂ ಮತ್ತು ಮೈಸೂರು, ಶಿವಮೊಗ್ಗ ಜಿಲ್ಲೆಗಳ ಮೇಲೂ ತನ್ನ ಆದಿಪತ್ಯವನ್ನು ಸ್ಥಾಪಿಸಿದನು. ಪ್ರಾರಂಭದಲ್ಲಿ ಸೊಸೆವೂರನ್ನು ರಾಜಧಾನಿಯನ್ನಾಗಿ ಹೊಂದಿದ್ದ ಇವನು ಅನಂತರ ಸ್ವಲ್ಪ ಮಟ್ಟಿಗೆ ಮೈದಾನ ಪ್ರದೇಶವಾಗಿದ್ದ ಹಾಗೂ ಸಂಪರ್ಕ ಸಾಧನಗಳಿಗೆ ಅನುಕೂಲವಾಗಿದ್ದ ದೋರಸಮುದ್ರವನ್ನು ರಾಜಧಾನಿಯಾಗಿ ಮಾಡಿಕೊಂಡನು.

ಚೆಂಗಾಳ್ವ ಮತ್ತು ಕೊಂಗಾಳ್ವರನ್ನು ಸೋಲಿಸಿ ಮೈಸೂರು ಜಿಲ್ಲೆಯ ಕನ್ನಂಬಾಡಿಯವರೆಗೂ ರಾಜ್ಯ ವಿಸ್ತರಿಸಿದನು. ತಲಕಾಡು ಗಂಗರ ಬಿರುದಾದ "ರಕ್ಕಸಗಂಗ" ಎಂಬುದನ್ನು ಧರಿಸಿ ಗಂಗವಾಡಿಯನ್ನು ಚೋಳರ ಆಳ್ವಿಕೆಯಿಂದ ಮುಕ್ತಗೊಳಿಸಲು ಪ್ರಯತ್ನಿಸಿದನು. ಇವನ ಕಾಲದಲ್ಲಿ ಕೊಂಕಣ, ಆಳ್ವಖೇಡ, ವೈನಾಡು ಮತ್ತು ತಲಕಾಡು ಹೊಯ್ಸಳ ರಾಜ್ಯದ ಗಡಿಗಳಾಗಿದ್ದವೆಂದು ಶಾಸನದಿಂದ ತಿಳಿದು ಬರುತ್ತದೆ.

ಕಲ್ಯಾಣಿ ಚಾಳುಕ್ಯರ ಸಾರ್ವಭೌಮಾಧಿಕಾರವನ್ನು ಒಪ್ಪಿಕೊಂಡು ಅವರ ಬಿರುದುಗಳಲ್ಲಿ ಒಂದಾದ ತ್ರಿಭುವನಮಲ್ಲ ಎಂಬುದನ್ನು ತಾನೂ ಧರಿಸಿದನು. ಕೇವಲ ರಾಜಕೀಯ ಸಂಬಂಧವಷ್ಟೇ ಅಲ್ಲದೆ ವೈವಾಹಿಕ ಸಂಬಂಧವೂ ಇವನ ಕಾಲದಲ್ಲಿ ಹೊಯ್ಸಳ ಮತ್ತು ಚಾಳುಕ್ಯರ ನಡುವೆ ಏರ್ಪಟ್ಟಿತ್ತೆಂದು ಶಾಸನವೊಂದು ತಿಳಿಸುತ್ತದೆ. ಚಾಳುಕ್ಯ ಚಕ್ರವರ್ತಿ

ಇಮ್ಮಡಿ ಸೋಮೇಶ್ವರನ ರಾಣಿಯಾದ ಹೊಯ್ಸಳ ಮಹಾದೇವಿಯು ವಿನಯಾದಿತ್ಯನ ಸಹೋದರಿಯಾಗಿದ್ದಳು. ವಿನಯಾದಿತ್ಯನ ಮಗನೂ, ಯುವರಾಜನೂ ಆದ ಎರೆಯಂಗನು ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನಿಗೆ ಬಲಭುಜದಂತಿದ್ದನು ಎಂದು ಶಾಸನಗಳಲ್ಲಿ ವರ್ಣಿಸಲಾಗಿದೆ. ಆರನೇ ವಿಕ್ರಮಾದಿತ್ಯನು ಕೈಗೊಂಡ ಉತ್ತರದ ದಂಡಯಾತ್ರೆಯ ಸಮಯದಲ್ಲಿ ಎರೆಯಂಗನು ಚಾಳುಕ್ಯ ಸೈನ್ಯದ ನೇತೃತ್ವವನ್ನು ವಹಿಸಿದ್ದನು. ಮಾಳ್ವವನ್ನು ಮುತ್ತಿದನಲ್ಲದೆ ಧಾರಾ ನಗರವನ್ನು ಮತ್ತು ಚಕ್ರಕೂಟವನ್ನು ಸೂರೆಗೊಂಡನು.

"ಪಂಚಮಹಾಶಬ್ಧ ಮಹಾಮಂಡಲೇಶ್ವರ ವೀರ ಎರೆಯಂಗ ಹೊಯ್ಸಳದೇವ" ಎಂಬ ಬಿರುದಾಂಕಿತನಾದ ಎರೆಯಂಗನಿಗೆ ಏಚಲಾದೇವಿ ಮತ್ತು ಮಹಾದೇವಿ ಎಂಬ ಇಬ್ಬರು ಪತ್ನಿಯರಿದ್ದರು. ಏಚಲಾದೇವಿ ಯುವರಾಣಿಯಾಗಿದ್ದಳು. ಈಕೆಯ ತಂದೆ ಗಂಗ ಸಂತತಿಯ ಪೆರ್ಮಾಡಿದೇವನು ಎಡತೊರೆ ನಾಡಿನ ಪ್ರಭುವಾಗಿದ್ದನು. ಎರೆಯಂಗ ಮತ್ತು ಏಚಲಾದೇವಿಗೆ ಬಲ್ಲಾಳ, ಬಿಟ್ಟಿದೇವ ಮತ್ತು ಉದಯಾದಿತ್ಯ ಎಂಬ ಮೂವರು ಗಂಡು ಮಕ್ಕಳಿದ್ದರು. ಪರಾಕ್ರಮಿಯೂ ಗುಣ ಸಂಪನ್ನನೂ ಆದ ಎರೆಯಂಗನು ಇನ್ನೂ ಯುವರಾಜನಾಗಿದ್ದಾಗಲೇ ತನ್ನ ತಂದೆಯ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ. 1099ರಲ್ಲಿ ಮರಣ ಹೊಂದಿದನು. ಜೈನ ಮತಾವಲಂಬಿ ಯಾಗಿದ್ದ ಎರೆಯಂಗನಿಗೆ 'ಗೋಪನಂದಿ' ಎಂಬ ಆಚಾರ್ಯನು ಗುರುವಾಗಿದ್ದನು.

ವಿನಯಾದಿತ್ಯನು ದಕ್ಷ ಆಡಳಿತಗಾರನಾಗಿದ್ದನು. ಪೋಚಿಮಯ್ಯ ಎಂಬುವನು ಅವನ ಮಹಾಸಂಧಿ ವಿಗ್ರಹಿಯಾಗಿದ್ದನು. ಮರಿಯಾನೆ ಮತ್ತು ಬಾಹುಬಲಿ ಎಂಬುವರು ಅವನ ಇತರ ಮುಖ್ಯ ಸಚಿವ ಮತ್ತು ದಂಡನಾಯಕರಾಗಿದ್ದರು. ವಿನಯಾದಿತ್ಯನು ಜೈನ ಮತಾವಲಂಬಿಯಾಗಿದ್ದನು. ಅವನ ರಾಣಿ ಕೆಳೆಯಬ್ಬರಿಸಿ ಜೈನ ಮತೀಯರಿಗೆ ಪ್ರೋತ್ಸಾಹ ನೀಡಿದಳು. ಶಾಂತಿದೇವ ಎಂಬ ಜೈನಮುನಿಯು ವಿನಯಾದಿತ್ಯನ ಗುರುವಾಗಿದ್ದನು. ಇಮ್ಮಡಿ ವಿನಯಾದಿತ್ಯನು ದಕ್ಷ ಆಡಳಿತಗಾರ ನಾಗಿದ್ದಂತೆ ಕಲಾಪ್ರೇಮಿಯೂ ಆಗಿದ್ದನು. ಮತ್ತಾವರ, ಸೊಸೆವೂರು, ಶ್ರವಣಬೆಳಗೊಳ, ಚಿಕ್ಕಹನ ಸೋಗೆ ಮೊದಲಾದ ಕಡೆಗಳಲ್ಲಿ ಅನೇಕ ಜೈನ ಬಸದಿಗಳು ಇವನ ಕಾಲದಲ್ಲಿ ನಿರ್ಮಾಣವಾದವು.

ವಿನಯಾದಿತ್ಯನು ಜೈನಮತೀಯನಾದರೂ, ಪರಮತ ಸಹಿಷ್ಣುವಾಗಿದ್ದನು. ತೊಣಚಿಯ ಬಸವೇಶ್ವರ, ಕುಪ್ಪತ್ತೂರಿನ ಕೈತಬೇಶ್ವರ ದೇವಾಲಯಗಳು ಈ ಕಾಲದಲ್ಲಿ ನಿರ್ಮಾಣವಾದವು. ಅವನು ಅನೇಕ ದಾನದತ್ತಿಗಳನ್ನು ಬಿಟ್ಟಿದ್ದಕ್ಕೆ ನಿದರ್ಶನಗಳಿವೆ. ಬಳ್ಳಿಗಾವೆಯಲ್ಲಿರುವ ಕೇದಾರೇಶ್ವರ ದೇವಾಲಯವು ವಿನಯಾದಿತ್ಯನ ಆಳ್ವಿಕೆಯಲ್ಲಿ ಕಟ್ಟಲಾದುದೆಂದು ಅಭಿಪ್ರಾಯಪಡಲಾಗಿದೆ. ಹೊಯ್ಸಳ ಸಂತತಿಯ ಪ್ರಾರಂಭದ ಪ್ರಬಲ

ರಾಜನಾದ ವಿನಯಾದಿತ್ಯನು ಅನೇಕ ಕೆರೆ, ಕಟ್ಟೆಗಳನ್ನು ಕಟ್ಟಿಸಿದನು. ಕೃಷಿಗೆ ಪ್ರೋತ್ಸಾಹವನ್ನು ನೀಡಿದ್ದನು. ವಿನಯಾದಿತ್ಯನು ಕ್ರಿ.ಶ. 1100 ರಲ್ಲಿ ಮರಣ ಹೊಂದಿದನು.

**ಒಂದನೇ ಬಲ್ಲಾಳ (ಕ್ರಿ.ಶ. 1100-1107)**

ಯುವರಾಜ ಎರೆಯುಂಗನು ಮೊದಲೇ ಮರಣ ಹೊಂದಿದ್ದರಿಂದ ವಿನಯಾದಿತ್ಯನ ಮೊಮ್ಮಗನಾದ ಹಾಗೂ ಎರೆಯುಂಗನ ಹಿರಿಯ ಮಗನಾದ ಬಲ್ಲಾಳನು ರಾಜನಾದನು. ಇವನನ್ನು ಒಂದನೇ ಬಲ್ಲಾಳನೆಂದು ಕರೆಯಲಾಗಿದೆ. ಪಟ್ಟಕ್ಕೆ ಬಂದ ಕೂಡಲೇ ಬಲ್ಲಾಳನು ತನ್ನ ಸಂತತಿಯ ಪೂರ್ವಿಕರ ನೆಲೆಯಾದ ಸೊಸೆವೂರು ಅಥವಾ ಶಶಕಪುರವನ್ನು ಸಂದರ್ಶಿಸಿ ಅಲ್ಲಿನ ದೇವಾಲಯ ಗಳಿಗೆ ಕೈಂಕರ್ಯಗಳನ್ನು ಏರ್ಪಡಿಸಿ ದತ್ತಿಗಳನ್ನು ಬಿಟ್ಟನು. ತನ್ನ ತಾತನಂತೆ ಬಲ್ಲಾಳನೂ ಕೂಡ ಕಲ್ಯಾಣದ ಚಾಳುಕ್ಯರ ಸಾಮಂತತ್ವವನ್ನು ಒಪ್ಪಿಕೊಂಡು 'ತ್ರಿಭುವನಮಲ್ಲ' ಎಂಬ ಬಿರುದನ್ನು ಹೊಂದಿದ್ದನು. ಪಟ್ಟಕ್ಕೆ ಬಂದ ಕೂಡಲೇ ಚೆಂಗಾಳ್ವರನ್ನು ಹತ್ತಿಕ್ಕಬೇಕಾಯಿತು. ಬಲ್ಲಾಳನು ದೋರಸಮುದ್ರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನು.

ಬಲ್ಲಾಳನ ಆಳ್ವಿಕೆಯ ಅತಿ ಮುಖ್ಯ ಘಟನೆ ಎಂದರೆ ಜಗದೇವ ಎಂಬುವನು ಹೊಯ್ಸಳ ರಾಜ್ಯವನ್ನು ಆಕ್ರಮಣ ಮಾಡಿದುದು. ಈ ಜಗದೇವ ಯಾರು ಎಂಬುದರ ಬಗ್ಗೆ ಜಿಜ್ಞಾಸೆ ಇದೆ. ಅವನು ಮಾಳವದ ದೊರೆ ಎಂದು ಅಭಿಪ್ರಾಯಪಡಲಾಗಿತ್ತು. ಆದರೆ ಮಾಳವದ ರಾಜನೊಬ್ಬನು ಚಾಳುಕ್ಯ ಸಾಮ್ರಾಜ್ಯವನ್ನು ದಾಟಿ ಹೊಯ್ಸಳ ರಾಜ್ಯದ ಆಕ್ರಮಣಕ್ಕೆ ಪ್ರಯತ್ನಿಸಿದನೆಂಬುದು ಸಮಂಜಸವಾಗಿ ತೋರುವುದಿಲ್ಲ. ಆದ್ದರಿಂದ ಜಗದೇಕನು ಶಾಂತಾರ ಸಂತತಿಯ ಪೊಟ್ಟ ಪೊಂಬುರ್ಚದ ರಾಜನಲ್ಲದೆ ಬೇರೆಯವನಲ್ಲ ಎಂದು ವೇದ್ಯವಾಗುತ್ತದೆ. ಏನೇ ಭಿನ್ನಾಭಿಪ್ರಾಯ ಗಳಿದ್ದರೂ, ಬಲ್ಲಾಳನು ತನ್ನ ಸಹೋದರನಾದ ವಿಷ್ಣುವರ್ಧನ ಸಹಾಯದಿಂದ ಶತ್ರುವನ್ನು ಎದುರಿಸಿ ಸೋಲಿಸಿ ಹಿಮ್ಮೆಟ್ಟಿಸಿದನು.

ಒಂದನೇ ಬಲ್ಲಾಳನಿಗೆ ಮಕ್ಕಳಿರಲಿಲ್ಲವಾದ್ದರಿಂದ ಉತ್ತರಾಧಿಕಾರಿಯನ್ನು ಪಡೆಯುವ ಹಂಬಲದಿಂದ ತನ್ನ ದಂಡನಾಯಕ ಮರಿಯಾನೆ ಎಂಬುವನ ಮೂವರು ಸುಂದರ ಪುತ್ರಿಯರಾದ ಪದ್ಮಲ, ಚಾಮಲ ಮತ್ತು ಬೊಪ್ಪಲದೇವಿಯರನ್ನು ವಿವಾಹ ಮಾಡಿಕೊಂಡು ಅವರ ಮಾತಾಪಿತೃ ಗಳಿಗೆ ಸಿಂದಗೆರೆ ಎಂಬ ಗ್ರಾಮವನ್ನು ದಾನವಾಗಿ ನೀಡಿದನು. ಆದರೂ ಬಲ್ಲಾಳನಿಗೆ ಮಕ್ಕಳಾಗಲಿಲ್ಲ. ಅವನು ಯಾವುದೋ ಒಂದು ಜನ್ಮಾಂತರೀಯ ರೋಗದಿಂದ ನರಳುತ್ತಿದ್ದನು. ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತನೆಂಬ ಯತಿಯು ರೋಗವನ್ನು ಉಪಶಮನಗೊಳಿಸಿ 'ಬಲ್ಲಾಳ ಜೀವರಕ್ಷಕ' ಎಂಬ ಬಿರುದನ್ನು ಪಡೆದನು. ಆದರೂ ಬಲ್ಲಾಳನು ಅನಾರೋಗ್ಯಕ್ಕೆ ತುತ್ತಾಗಿ ಮರಣ ಹೊಂದಿದನು. ಅವನು ಜೈನಮತಾವಲಂಬಿಯಾಗಿದ್ದರೂ ಪರಮತ ಸಹಿಷ್ಣುವಾಗಿದ್ದನು. ಶುಭಚಂದ್ರ ಜೈನಮುನಿ ಎಂಬ

ಪ್ರಸಿದ್ಧ ಜೈನಯತಿ ಅವನ ಸಮಕಾಲೀನನಾಗಿದ್ದನು. ರಾಜಧಾನಿ ಮತ್ತು ಇತರ ಕಡೆಗಳಲ್ಲಿನ ಹಲವು ಜೈನ ಬಸದಿಗಳು ಅವನ ಕಾಲದಲ್ಲಿ ನಿರ್ಮಾಣವಾದವು.

**ವಿಷ್ಣುವರ್ಧನ (ಕ್ರಿ.ಶ. 1108-1142)**

ಒಂದನೇ ಬಲ್ಲಾಳನಿಗೆ ಮಕ್ಕಳಿರಲಿಲ್ಲವಾದ್ದರಿಂದ ಅವನ ಮರಣಾನಂತರ ಅವನ ತಮ್ಮನಾದ ವಿಷ್ಣುವರ್ಧನನು ರಾಜನಾದನು. ತನ್ನ 35 ವರ್ಷಗಳ ಆಳ್ವಿಕೆಯಲ್ಲಿ ವಿಷ್ಣುವರ್ಧನನು ಹೊಯ್ಸಳ ಸಂತತಿಯ ಅಧಿಕಾರವನ್ನು ಭದ್ರಬುನಾದಿಯ ಮೇಲೆ ರಾಜ್ಯವನ್ನು ಸ್ಥಾಪಿಸಿದನಲ್ಲದೆ, ವಿಸ್ತರಿಸಿ ಆಡಳಿತವನ್ನು ವ್ಯವಸ್ಥೆಗೊಳಿಸಿದನು. ಸಾಹಿತ್ಯ, ಧರ್ಮ, ಕಲೆಗೆ ವಿಶೇಷ ಪ್ರೋತ್ಸಾಹವನ್ನು ನೀಡಿದನು. ಪ್ರಜೆಗಳ ಪುರೋಭಿವೃದ್ಧಿಗಾಗಿ ಶ್ರಮಿಸಿ ಪ್ರಜಾನುರಾಗ ಗಳಿಸಿದನು. ಚಾಳುಕ್ಯರ ಪರಮಾಧಿಕಾರವನ್ನು ಕೊನೆಗಾಣಿಸಿ, ಸ್ವತಂತ್ರ ಆಡಳಿತವನ್ನು ಸ್ಥಾಪಿಸಿ, ಚೋಳರನ್ನು ಕನ್ನಡ ನಾಡಿನಿಂದ ಓಡಿಸಿ, ಕನ್ನಡನಾಡಿಗೆ ಆಶ್ರಯ ಕೋರಿ ಬಂದ ಧರ್ಮ ಸುಧಾರಕ ಶ್ರೀ ರಾಮಾನುಜಾ ಚಾರ್ಯರನ್ನು ಪುರಸ್ಕರಿಸಿ, ಬೇಲೂರು ಮತ್ತು ಹಳೇಬೀಡಿನ ಮನಮೋಹಕ ದೇವಮಂದಿರಗಳನ್ನು ನಿರ್ಮಿಸಿ, ಚತುಸ್ಸಮಯ ಸಮುದ್ಧರಣನೆನಿಸಿದ ಬಿಟ್ಟಿಗ ವಿಷ್ಣುವರ್ಧನನು ಹೊಯ್ಸಳ ಸಂತತಿಯ ಪರಮಶ್ರೇಷ್ಟ ರಾಜರಲ್ಲಿ ಒಬ್ಬನಾಗಿರುವುದಲ್ಲದೆ ಕನ್ನಡನಾಡಿನ ಆದರ್ಶ ಪ್ರಭುಗಳಲ್ಲಿ ಒಬ್ಬನಾಗಿದ್ದಾನೆ.

ವಿಷ್ಣುವರ್ಧನನು ತನ್ನ ತಾತನಾದ ಎರಡನೆ ವಿಕ್ರಮಾದಿತ್ಯನ ಆಳ್ವಿಕೆಯ ಕೊನೆಗಾಲದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನ ಬೆಳಗೊಳದ ಸುತ್ತಮುತ್ತಲ ಪ್ರದೇಶಕ್ಕೆ ಪ್ರಾಂತ್ಯಾಧಿಕಾರಿಯಾಗಿದ್ದನು. ಬೆಳಗೊಳದ ಸೀತಾರಾಮ ದೇವಾಲಯಕ್ಕೆ ದಾನನೀಡಿ ಆ ಗ್ರಾಮವನ್ನು ಒಂದು ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ಕೊಟ್ಟನು. ಆ ಪ್ರದೇಶವನ್ನು 1096ರ ಶಾಸನವು 'ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲ' ಎಂಬ ಹೆಸರಿನಿಂದಲೇ ಕರೆದಿದೆ. ತನ್ನ ಅಣ್ಣ ಬಲ್ಲಾಳನ ಆಳ್ವಿಕೆಯಲ್ಲಿ ಯುದ್ಧ ಮತ್ತು ಆಡಳಿತದಲ್ಲಿ ಸಕ್ರಿಯ ಪಾತ್ರ ವಹಿಸಿದ್ದನು. ಜಗದೇವ ಹಾಗೂ ಇತರರೊಡನೆ ಪರಾಕ್ರಮದಿಂದ ಹೋರಾಡಿ ಶತ್ರುಗಳನ್ನು ಸೋಲಿಸಿದನು. ಇವನು ತನ್ನ ಅಣ್ಣನಲ್ಲಿಟ್ಟಿದ್ದ ಪ್ರೀತ್ಯಾಧರಗಳನ್ನು ಕುರಿತು ಶಾಸನವೊಂದು ರಾಮಲಕ್ಷ್ಮಣರ ಉದಾಹರಣೆಯೊಡನೆ ವರ್ಣಿಸಿದೆ. ಪಟ್ಟಕ್ಕೆ ಬರುವ ಮೊದಲೆ ಆಡಳಿತ ಮತ್ತು ಯುದ್ಧಗಳಲ್ಲಿ ನುರಿತು ವಿಶೇಷ ಅನುಭವ ಗಳಿಸಿದ್ದನು.

ಕ್ರಿ.ಶ. 1008ರಲ್ಲಿ ವಿಷ್ಣುವರ್ಧನನು ಸಿಂಹಾಸನಕ್ಕೆ ಬಂದನು. ವಿಷ್ಣುವರ್ಧನನು ಮುಖ್ಯವಾಗಿ ಎರಡು ಆಶಯಗಳನ್ನು ಹೊಂದಿದ್ದನು. ಅವುಗಳೆಂದರೆ ಮೊದಲನೆಯದಾಗಿ ಗಂಗವಾಡಿ ಮತ್ತು ನೊಳಂಬವಾಡಿ ಪ್ರದೇಶಗಳನ್ನು ಚೋಳರ ಆಳ್ವಿಕೆಯಿಂದ ಪಾರು ಮಾಡುವುದು. ಎರಡನೆಯದಾಗಿ ಚಾಳುಕ್ಯರ ಅಧೀನತೆಯನ್ನು ಕೊನೆಗಾಣಿಸಿ ತನ್ನ ಮನೆತನದ ಸ್ವತಂತ್ರ ಆಳ್ವಿಕೆಯನ್ನು ಕನ್ನಡನಾಡಿನಲ್ಲಿ ಸ್ಥಾಪಿಸುವುದು. ಈ ಧ್ಯೇಯಗಳ ಸಾಧನೆಗಳಿಗಾಗಿ

ಕಾರ್ಯೋನ್ಮುಖ ನಾದನು. ಸಿಂಹಾಸನಕ್ಕೆ ಬಂದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ, ಸೈನ್ಯವನ್ನು ಹೆಚ್ಚಿಸಿಕೊಂಡು, ಅನುಭವಿಗಳನ್ನೂ, ಪರಾಕ್ರಮಿಗಳನ್ನೂ ಸಚಿವ ಮತ್ತು ದಂಡನಾಯಕರುಗಳಾಗಿ ನೇಮಿಸಿಕೊಂಡನು. ಶೂರನೂ, ಅನುಭವಿಯೂ, ದಕ್ಷನೂ ಆದ ಗಂಗರಾಜನನ್ನು ತನ್ನ ಪ್ರಧಾನ ದಂಡನಾಯಕನನ್ನಾಗಿ ನೇಮಿಸಿದನು. ಸರ್ವಸಿದ್ಧತೆಗಳನ್ನು ಮಾಡಿಕೊಂಡು ಗಂಗವಾಡಿಯನ್ನು ಚೋಳರ ಆಕ್ರಮಣದಿಂದ ತೆರವು ಮಾಡಲು ಅಣಿಯಾದನು. ಕ್ರಿ.ಶ. 1114ರಲ್ಲಿ ತಲಕಾಡನ್ನು ಮುತ್ತಲು ನಿರ್ಧರಿಸಿ ಗಂಗ ರಾಜನನ್ನು ಮುಖ್ಯ ದಂಡನಾಯಕನನ್ನಾಗಿ ನೇಮಿಸಿ ಅವನನ್ನು ಹುರಿದುಂಬಿಸಿ ಕೆಲವು ಗ್ರಾಮಗಳನ್ನು ದತ್ತಿಯಾಗಿ ನೀಡಿ ರಣವೀಳ್ಯ ನೀಡಿದನು.

ವಿಷ್ಣುವರ್ಧನನ ರಾಜ್ಯ ವಿಸ್ತರಣೆಯು ತಲಕಾಡು ಕದನದಿಂದ ಆರಂಭವಾಯಿತು. ಆದಿಯಮ ಎಂಬುವನು ಆ ಸಮಯದಲ್ಲಿ ಚೋಳ ಸಾಮ್ರಾಟನ ಪ್ರಾಂತ್ಯಾಧಿಕಾರಿಯಾಗಿ ಗಂಗವಾಡಿಯ ಆಡಳಿತಕ್ಕೆ ನೇಮಿತವಾಗಿದ್ದನು. ಚೋಳರು ಗಂಗವಾಡಿಯನ್ನು 'ರಾಜರಾಜ ಚೋಳಮಂಡಲ' ಎಂಬುದಾಗಿಯೂ ತಲಕಾಡನ್ನು 'ರಾಯ ರಾಯಪುರ' (ರಾಜ ರಾಜಪುರ) ಎಂಬುದಾಗಿಯೂ ಕರೆಯುತ್ತಿದ್ದರು. ರಾಜ ನೀತಿಜ್ಞನಾದ ಗಂಗರಾಜನು ರಕ್ತಪಾತಕ್ಕೆ ಎಡೆಯಿಲ್ಲದಂತೆ ಗಂಗವಾಡಿಯನ್ನು ಬಿಟ್ಟುಕೊಡಬೇಕೆಂದು ದೂತರ ಮೂಲಕ ಆದಿಯಮನಿಗೆ ಹೇಳಿ ಕಳುಹಿಸಿದನು. ಆದರೆ ಯುದ್ಧ ಮಾಡಿ ತಲಕಾಡನ್ನು ವಶಪಡಿಸಿಕೊಳ್ಳುವಂತೆ ಆದಿಯಮನು ದರ್ಪದಿಂದ ಉತ್ತರಿಸಿದನು. ಇದರಿಂದ ಯುದ್ಧ ಅನಿವಾರ್ಯವಾಯಿತು. ವಿಷ್ಣುವರ್ಧನ ಮತ್ತು ಗಂಗರಾಜರು ಹೊಯ್ಸಳ ಸೈನ್ಯವನ್ನು ಕನ್ನಂಬಾಡಿ ಮತ್ತು ಶ್ರೀರಂಗಪಟ್ಟಣದ ಮುಖಾಂತರ ತಲಕಾಡಿನತ್ತ ನಡೆಸಿದರು. ಮೊದಲೇ ಸಿದ್ಧರಾಗಿದ್ದ ಚೋಳ ಅಧಿಕಾರಿಗಳಾದ ಆದಿಯಮ, ದಾಮೋದರ, ನರಸಿಂಗ ವರ್ಮನ್ ಮೊದಲಾದವರು ತಲಕಾಡಿನ ಹೊರವಲಯದಲ್ಲಿ ಹೊಯ್ಸಳ ಸೈನ್ಯವನ್ನು ಎದುರಿಸಿದರು. ತಲಕಾಡು ಯುದ್ಧ ಕ್ರಿ.ಶ. 1116ರಲ್ಲಿ ನಡೆಯಿತು ಎಂಬ ಅಭಿಪ್ರಾಯ ಪ್ರಚಲಿತವಾಗಿತ್ತು. ಆದರೆ ಕ್ರಿ.ಶ. 1114ರ ಪ್ರಾರಂಭದಿಂದ ಚೋಳರ ಶಾಸನಗಳು ಗಂಗವಾಡಿಯ ಪ್ರದೇಶದಲ್ಲಿ ದೊರಕದಿರುವುದರಿಂದಲೂ ಹಾಗೂ ವಿಷ್ಣುವರ್ಧನನು ಕ್ರಿ.ಶ. 1115ರ ಆದಿಯಲ್ಲೇ ಪ್ರಥಮವಾಗಿ 'ತಲಕಾಡು ಗೊಂಡ' ಎಂಬ ಬಿರುದನ್ನು ಧರಿಸಿದ್ದುದರಿಂದಲೂ ತಲಕಾಡು ಕದನವು ಕ್ರಿ.ಶ. 1114ರಲ್ಲಿಯೇ ನಡೆಯಿತೆಂದು ಖಚಿತವಾಗಿ ತಿಳಿದುಬರುತ್ತದೆ.

ತಲಕಾಡಿನ ಹೊರವಲಯದಲ್ಲಿ ಹೊಯ್ಸಳ ಮತ್ತು ಚೋಳ ಸೈನ್ಯಗಳಿಗೆ ಭೀಕರ ಕದನವು ಜರುಗಿತು. ಹೊಯ್ಸಳ ಸೇನೆಯ ಆಕ್ರಮಣವನ್ನು ಆದಿಯಮನು ತಡೆಗಟ್ಟಲಾಗಲಿಲ್ಲ. ಚೋಳ ಸೈನ್ಯದಲ್ಲಿ ಹೆಚ್ಚು ಸಾವು ನೋವುಗಳುಂಟಾದವು. ಚೋಳ ಸೈನ್ಯವು ಸೋತು, ಕಂಗೆಟ್ಟು, ಹಿಮ್ಮೆಟ್ಟಿ ತಲಕಾಡಿನ ಕೋಟೆಯೊಳಗೆ ರಕ್ಷಣೆ ಪಡೆಯಲು ಧಾವಿಸಿತು. ವಿಷ್ಣುವರ್ಧನ ಮತ್ತು ಗಂಗರಾಜರ ನಾಯಕತ್ವದ ಹೊಯ್ಸಳ ಸೈನ್ಯವು ಶತ್ರು ಸೈನ್ಯವನ್ನು

ಬೆನ್ನಟ್ಟಿ ಕೋಟೆಯನ್ನು ಪ್ರವೇಶಿಸಿ ವೀರಾವೇಶ ದಿಂದ ಹೋರಾಡಿತು. ವೈರಿ ಸೇನೆಯು ಸೋತು ರಕ್ಷಣೆಗಾಗಿ ದಿಕ್ಕು ದಿಕ್ಕಿಗೆ ಓಡಿತು. ಗಂಗರಾಜನು ಆದಿಯಮನ ನಿವಾಸವನ್ನು ಹೊಕ್ಕು ಅವನನ್ನು ಇರಿದು ಕೊಂದನು. ಅಳಿದುಳಿದ ಚೋಳ ಸೈನ್ಯ ಎರಡು ಗುಂಪುಗಳಾಗಿ ತಮಿಳುನಾಡಿನತ್ತ ಧಾವಿಸಿತು. ಒಂದು ಪಡೆಯು ಕೊಂಗುನಾಡಿನತ್ತ ಪಲಾಯನ ಮಾಡಿತು. ವಿಷ್ಣುವರ್ಧನನ ಸೈನ್ಯ ಅದನ್ನು ಬೆನ್ನಟ್ಟಿ ಕೊಂಗುನಾಡನ್ನು ವಶಪಡಿಸಿ ಕೊಂಡಿತು. ಮತ್ತೊಂದು ಪಡೆಯು ಕೋಲಾರದ ಮಾರ್ಗವಾಗಿ ಪಲಾಯನ ಮಾಡಿತು. ವಿಷ್ಣುವರ್ಧನನೇ ಸ್ವತಃ ಇದನ್ನು ಬೆನ್ನಟ್ಟಿ ನೊಳಂಬವಾಡಿಯನ್ನು ಆಕ್ರಮಿಸಿ ಕೋಲಾರ ಮತ್ತು ನಾಂಗಲಿಯವರೆಗಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ಗಂಗವಾಡಿಯು ಚೋಳರಿಂದ ವಿಮುಕ್ತ ವಾಯಿತು. ವಿಷ್ಣುವರ್ಧನನ ಸೈನ್ಯ ತಮಿಳುನಾಡಿನ ಗಡಿಗಳನ್ನು ಪ್ರವೇಶಿಸಿ ತನ್ನ ಪರಾಕ್ರಮವನ್ನು ಮೆರೆಯಿತು. ಆಂತರಿಕ ತೊಂದರೆಗೆ ಒಳಗಾಗಿದ್ದ ಚೋಳ ಚಕ್ರವರ್ತಿ ಕುಲೋತ್ತುಂಗನು ಮತ್ತೆ ಗಂಗವಾಡಿಯನ್ನು ಸ್ವಾಧೀನಪಡಿಸಿಕೊಳ್ಳುವ ಅಥವಾ ಹೊಯ್ಸಳರ ಮೇಲೆ ಯುದ್ಧ ಮಾಡುವ ಸಾಹಸಕ್ಕೆ ಕೈ ಹಾಕಲಿಲ್ಲ.

ತಲಕಾಡು ವಿಜಯವು ಕನ್ನಡನಾಡಿನ ಇತಿಹಾಸದಲ್ಲಿ, ಹಾಗೂ ಹೊಯ್ಸಳರ ಅಭ್ಯುದಯಕ್ಕೆ ಸಂಬಂಧಿಸಿದಂತೆ ಒಂದು ಮಹತ್ತರ ಘಟನೆಯಾಗಿದೆ. ಕ್ರಿ.ಶ. 1004ರಲ್ಲಿ ಗಂಗ ಸಂತತಿಯ ವಿನಾಶದೊಡನೆ ಸುಮಾರು ಒಂದು ನೂರು ವರ್ಷಗಳ ಕಾಲ ಚೋಳರ ಆಳ್ವಿಕೆಗೆ ಒಳಗಾಗಿದ್ದ ಕನ್ನಡ ಪ್ರದೇಶಗಳು ವಿಮೋಚನೆ ಪಡೆದವು. ಹೊಯ್ಸಳ ರಾಜ್ಯವು ವಿಸ್ತಾರವಾಯಿತು. ಗಂಗವಾಡಿ, ನೊಳಂಬವಾಡಿ, ಕೊಂಗುನಾಡುಗಳು ಹೊಯ್ಸಳ ರಾಜ್ಯಕ್ಕೆ ಸೇರಿದವು. ವಿಷ್ಣುವರ್ಧನನು 'ತಲಕಾಡು ಗೊಂಡ' ಹಾಗೂ ಗಂಗ ವಂಶದ ಉತ್ತರಾಧಿಕಾರಿ ಎಂಬರ್ಥದಲ್ಲಿ 'ವಿಕ್ರಮಗಂಗ' ಎಂಬ ಬಿರುದುಗಳನ್ನು ಧರಿಸಿದನು. ತನ್ನ ಈ ವಿಜಯಗಳ ಜ್ಞಾಪಕಾರ್ಥವಾಗಿ, ತನ್ನ ಇಷ್ಟ ದೇವನಾದ ವಿಷ್ಣುವಿಗಾಗಿ ಅನೇಕ ಮಂದಿರಗಳನ್ನು ಕಟ್ಟಿಸಿದನು. ಬೇಲೂರಿನ ಚೆಲುವ ನಾರಾಯಣ, ತಲಕಾಡಿನ ಕೀರ್ತಿ ನಾರಾಯಣ ಮೊದಲಾದವುಗಳನ್ನು ನಿರ್ಮಿಸಿದನು. ಅನೇಕ ದಾನದತ್ತಿಗಳನ್ನು ನೀಡಿದನಲ್ಲದೆ "ತಲಕಾಡುಗೊಂಡ, ನೊಳಂಬವಾಡಿಗೊಂಡ, ಮಲೆಪರೋಳ್ ಗಂಡ" ಎಂಬ ಬಿರುದುಗಳನ್ನು ಟಂಕಿಸಿದ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ತನ್ನ ವಿಜಯಕ್ಕೆ ಬಹುಮಟ್ಟಿಗೆ ಕಾರಣನಾದ ಗಂಗರಾಜನಿಗೆ 'ಮಹಾಪ್ರಚಂಡ ದಂಡನಾಥ' ಮುಂತಾದ ಬಿರುದುಗಳನ್ನು ನೀಡಿದನಲ್ಲದೆ ಅನೇಕ ಗ್ರಾಮಗಳನ್ನು ದಾನವಾಗಿ ಕೊಟ್ಟನು. ಗಂಗರಾಜನು ಅಷ್ಟೇ ವಿಶಾಲ ಹೃದಯದಿಂದ, ಧರ್ಮ ನಿಷ್ಠೆಯಿಂದ ಆ ದತ್ತಿಗಳನ್ನು ಜಿನಮುನಿಗಳಿಗೆ ದತ್ತಿಯಾಗಿ ನೀಡಿದನು. ತಲಕಾಡಿನ ವಿಜಯ ಹೊಯ್ಸಳರ ಪ್ರಾಬಲ್ಯವನ್ನು ಸಾರಿತು. ದಕ್ಷಿಣ ಭಾರತದ ಇತರ ರಾಜಮನೆತನಗಳಲ್ಲಿ ವಿಷ್ಣುವರ್ಧನನ ಕೀರ್ತಿ ಪರಾಕ್ರಮಗಳು ಏಕಕಾಲದಲ್ಲಿ ಭಯಾಶ್ಚರ್ಯಗಳನ್ನು ಮೂಡಿಸಿದವು.

ಚೋಳರನ್ನು ಸೋಲಿಸಿ ಗಂಗವಾಡಿಯ ಮೇಲೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿದ ಅನಂತರ ವಿಷ್ಣುವರ್ಧನನು ಸ್ವತಂತ್ರವಾಗಿ ಆಳಲು ಆರಂಭಿಸಿದನು. ಪುಣಿಸಮಯ್ಯನ ನೇತೃತ್ವದ ಹೊಯ್ಸಳ ಸೇನೆಯು ನೀಲಗಿರಿಯನ್ನು ವಶಪಡಿಸಿಕೊಂಡು ನೀಲಾದ್ರಿಯ ಮೇಲೆ ಹೊಯ್ಸಳ ಧ್ವಜವನ್ನು ಹಾರಿಸಿತು. ವಿಷ್ಣುವರ್ಧನನು ಸ್ವತಃ ಸೈನ್ಯ ಸಮೇತನಾಗಿ ಹೋಗಿ ಚಾಳುಕ್ಯರ ಸಾಮಂತರಾದ ಶಾಂತಾರರನ್ನು, ಹಾನಂಗಲ್ಲಿನ ಕದಂಬರನ್ನು ಸೋಲಿಸಿದನು. ಕ್ರಿ.ಶ. 1117ರಲ್ಲಿ ಉಚ್ಛಂಗಿಯ ಪಾಂಡ್ಯರನ್ನು ಚಿತ್ರದುರ್ಗ ಜಿಲ್ಲೆಯ 'ದುಮ್ಮೆ' ಎಂಬಲ್ಲಿ ಸೋಲಿಸಿ ಕಪ್ಪಕಾಣಿಕೆಯನ್ನು ಪಡೆದು ತನ್ನ ರಾಜ್ಯದ ಗಡಿಯನ್ನು ವಿಸ್ತರಿಸಿದನು.

ಹೊಯ್ಸಳರ ಪ್ರಾಬಲ್ಯ ಕ್ರಮೇಣ ಬೆಳೆಯುತ್ತಿದ್ದುದನ್ನು ಗಮನಿಸಿದ ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನು (1075–1127) ವಿಷ್ಣುವರ್ಧನನ ಪ್ರಭಾವವನ್ನು ತಡೆಗಟ್ಟಲು ತವಕಿಸುತ್ತಿದ್ದನು. ತನ್ನ ಪರಮಾಧಿಕಾರವನ್ನು ಕೊನೆಗಾಣಿಸಿದುದಲ್ಲದೆ ತನ್ನ ಸಾಮಂತರನ್ನು ಸೋಲಿಸಿದ ವಿಷ್ಣುವರ್ಧನನನ್ನು ಶಿಕ್ಷಿಸಲು ಹವಣಿಸಿದನು. ಹೊಯ್ಸಳ ಸೇನೆಯು ಅನೇಕ ಯುದ್ಧಗಳಲ್ಲಿ ಗಳಿಸಿದ ವಿಜಯಗಳಿಂದ ಅದರ ಬಲವನ್ನು ಅರಿತಿದ್ದ ವಿಕ್ರಮಾದಿತ್ಯನು ಸಾಮ್ರಾಜ್ಯದ ಜೊತೆಗೆ ಎಲ್ಲಾ ಸಾಮಂತರ ಸೈನ್ಯಗಳನ್ನು ಒಟ್ಟುಗೂಡಿಸಿದನು. ಅನುಭವಿಯೂ, ಸಮರ್ಥನೂ ಆದ ಸಿಂದ್ ಸಾಮಂತ ಆಚ್ಚುಗಿಯನ್ನು ಸೈನ್ಯದ ಮುಖಂಡನನ್ನಾಗಿ ನೇಮಿಸಿ ಹೊಯ್ಸಳರ ರಾಜಧಾನಿ ದೋರಸಮುದ್ರವನ್ನು ಆಕ್ರಮಿಸಲು ಕಳುಹಿಸಿದನು. ಕ್ರಿ.ಶ. 1118ರಲ್ಲಿ ಅಪರಿಮಿತ ಚಾಳುಕ್ಯ ಸೈನ್ಯ ದೋರಸಮುದ್ರವನ್ನು ಆಕ್ರಮಿಸಲು ಪ್ರಯಾಣ ಕೈಗೊಂಡು ಹಾಸನ ಜಿಲ್ಲೆಯ ಕಣ್ಣೆಗಾಲ ಗ್ರಾಮವನ್ನು ತಲುಪಿತು.

ವಿಷ್ಣುವರ್ಧನ ಮತ್ತು ದಂಡನಾಯಕ ಗಂಗರಾಜನು ಚಾಳುಕ್ಯ ಸೈನ್ಯವನ್ನು ದೂರದಲ್ಲೇ ಎದುರಿಸಲು ತೀರ್ಮಾನಿಸಿದರು. ವಿಷ್ಣುವರ್ಧನನು ಯುದ್ಧ ನಿರ್ವಹಣೆಯ ಸಮಸ್ತ ಅಧಿಕಾರವನ್ನು ಗಂಗರಾಜನಿಗೆ ವಹಿಸಿದನು. ಗಂಗರಾಜನು ಚಾಳುಕ್ಯ ಸೈನ್ಯವನ್ನು ಕಣ್ಣೆಗಾಲದ ಬಳಿಯಲ್ಲಿ ತಡೆಗಟ್ಟಿದನು. ಅಪಾರ ಚಾಳುಕ್ಯ ಸೈನ್ಯದ ಮೇಲೆ ರಾತ್ರಿ ವೇಳೆಯಲ್ಲಿ ಎರಗಿದನು. ಹೊಯ್ಸಳ ಸೈನ್ಯದ ಈ ಅನಿರೀಕ್ಷಿತ ದಾಳಿಗೀಡಾದ ಚಾಳುಕ್ಯ ಸೈನ್ಯವು ಸೋತು ಯುದ್ಧ ಸಾಮಗ್ರಿಗಳನ್ನು ರಣರಂಗದಲ್ಲೇ ಬಿಟ್ಟು ಓಡಿತು. ಗಂಗರಾಜನು ಹೊಯ್ಸಳ ಗಡಿಯವರೆಗೂ ವೈರಿಗಳನ್ನು ಬೆನ್ನಟ್ಟಿ ಹೋದನು. ಶತ್ರು ಸೈನ್ಯ ಬಿಟ್ಟು ಹೋದ ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿ ತಂದು ವಿಷ್ಣುವರ್ಧನನಿಗೆ ಒಪ್ಪಿಸಿದನು. ಗಂಗರಾಜನ ಸಾಮರ್ಥ್ಯದಿಂದ ವಿಷ್ಣುವರ್ಧನನಿಗೆ ಒದಗಿದ್ದ ವಿಪತ್ತು ದೂರವಾಯಿತು. ಸಂತುಷ್ಟನಾದ ವಿಷ್ಣುವರ್ಧನನು ಗಂಗರಾಜನಿಗೆ ಎರಡು ಗ್ರಾಮಗಳನ್ನೂ, ಬಿರುದುಗಳನ್ನೂ ನೀಡಿ ಸನ್ಮಾನಿಸಿದನು.

ವಿಕ್ರಮಾದಿತ್ಯನು ಬದುಕಿರುವವರೆಗೂ ಹೊಯ್ಸಳರಿಗೂ ಚಾಳುಕ್ಯರಿಗೂ ಯುದ್ಧಗಳು ಮನಃ ಸಂಘಟಿಸಲಿಲ್ಲ. ವಿಷ್ಣುವರ್ಧನನು ಆಡಳಿತ ಸುಧಾರಣೆ, ಸಾಹಿತ್ಯ, ಕಲೆಗೆ ವಿಶೇಷ ಪ್ರೋತ್ಸಾಹವನ್ನು ನೀಡಿ ರಾಜ್ಯ ವಿಸ್ತರಣೆಗೆ ಶಕ್ತಿ ಸಂಘಟನಾ ಕಾರ್ಯದಲ್ಲಿ ತೊಡಗಿದ್ದನು. ಕ್ರಿ.ಶ. 1127ರಲ್ಲಿ ವಿಕ್ರಮಾದಿತ್ಯನ ಮರಣದ ನಂತರ ವಿಷ್ಣುವರ್ಧನನ ರಾಜ್ಯ ವಿಸ್ತರಣಾ ನೀತಿಗೆ ಅವಕಾಶ ದೊರೆಯಿತು. ಕೃಷ್ಣಾ ನದಿಯವರೆಗೂ ತನ್ನ ಅಧಿಕಾರವನ್ನು ಸ್ಥಾಪಿಸಲು ಯೋಚಿಸಿಕೊಂಡಿದ್ದನು. ಆದರೆ ಆ ವೇಳೆಗೆ ಅವನು ಹಲವು ಕೌಟುಂಬಿಕ ಆಘಾತಕ್ಕೀಡಾದನು. ಅವನ ಏಕಮಾತ್ರ ಪುತ್ರನೂ, ಯುವರಾಜನೂ, ಆಗಿದ್ದ ಕುಮಾರ ಬಲ್ಲಾಳನು 1129ರಲ್ಲಿ ಅಕಾಲ ಮರಣಕ್ಕೀಡಾದನು. ತನ್ನ ಪ್ರೀತಿ ಪಾತ್ರ ಪುತ್ರನ ಅಗಲಿಕೆಯ ವೇದನೆಯನ್ನು ತಡೆಯಲಾಗದೆ ವಿಷ್ಣುವರ್ಧನನ ಅಚ್ಚುಮೆಚ್ಚಿನ ರಾಣಿಯಾದ ಶಾಂತಲಾದೇವಿಯು ಸಲ್ಲೇಖನ ವಿಧಿಯನ್ನು ಅನುಸರಿಸಿ ಮರಣ ಹೊಂದಿದಳು. ದುಃಖತಪ್ತನಾಗಿದ್ದ ವಿಷ್ಣುವರ್ಧನನಿಗೆ ಮತ್ತೊಂದು ಆಘಾತವು ಕಾದಿತ್ತು. ತನ್ನ ಪ್ರಭುವಿನ ಏಳಿಗೆಯೇ ತನ್ನ ಸರ್ವಸ್ವವೆಂದು ಬಗೆದು ವಿಷ್ಣುವರ್ಧನನ ಬಲಭುಜದಂತಿದ್ದ ಅಮಾತ್ಯ ಗಂಗರಾಜನು 1130ರಲ್ಲಿ ಮರಣ ಹೊಂದಿದನು. ತನ್ನ ಆಪ್ತೇಷ್ಟರ ಅಗಲುವಿಕೆಯ ದುಃಖದಿಂದ ಚೇತರಿಸಿಕೊಳ್ಳಲು ವಿಷ್ಣುವರ್ಧನನಿಗೆ ಒಂದೆರಡು ವರ್ಷಗಳೇ ಬೇಕಾಯಿತು. ಅವನು 1131ರಲ್ಲಿ ಲಕ್ಷ್ಮೀದೇವಿ ಎಂಬುವಳನ್ನು ವರಿಸಿದನು. ಕ್ರಿ.ಶ. 1133ರಲ್ಲಿ ಅವನ ಪಟ್ಟದ ರಾಣಿಯಾದ ಲಕ್ಷ್ಮೀದೇವಿಗೆ ಪುತ್ರೋತ್ಸವವಾಯಿತು. ತನ್ನ ರಾಜ್ಯದ ಉತ್ತರದ ಗಡಿಗಳತ್ತ ದಂಡೆತ್ತಿ ಹೋಗಿ ವಿಜಯದಿಂದ ಹಿಂತಿರುಗುತ್ತಿದ್ದಾಗ ಸುದ್ದಿ ಮುಟ್ಟಿತು. ಅದೇ ವೇಳೆಗೆ ಗಂಗರಾಜನ ಸ್ಮರಣಾರ್ಥವಾಗಿ ಅವನ ಮಗ ಬೊಪ್ಪ ದಂಡನಾಯಕನು ರಾಜಧಾನಿಯಲ್ಲಿ ಕಟ್ಟಿಸಿದ ಜೈನ ಬಸದಿಯು ಪೂರ್ಣಗೊಂಡ "ದ್ರೋಹಗರಟ್ಟ" ಜಿನಾಲಯದ ತೀರ್ಥ ಪ್ರಸಾದಗಳು ರಾಜನಿಗೆ ತಲುಪಿದವು. ಇವುಗಳಿಂದ ಆನಂದಪಟ್ಟ ವಿಷ್ಣುವರ್ಧನನು ತನ್ನ ಪುತ್ರನಿಗೆ ವಿಜಯನರಸಿಂಹನೆಂದೂ, ಗಂಗರಾಜನ ಸ್ಮರಣಾರ್ಥ ಕಟ್ಟಿಸಿದ ಬಸದಿಗೆ 'ವಿಜಯಪಾರ್ಶ್ವನಾಥ ಜಿನಾಲಯ' ಎಂದೂ ಹೆಸರಿಟ್ಟನು. ವಿಜಯ ನರಸಿಂಹನಿಗೆ ಕೂಡಲೇ ಯುವರಾಜ ಪಟ್ಟವನ್ನು ಕಟ್ಟಿ ತನ್ನ ಅನೇಕ ಬಿರುದುಗಳನ್ನು ಅವನಿಗೆ ಕೊಟ್ಟನು.

ಉತ್ತರಾಧಿಕಾರಿಯ ಜನನದಿಂದ ಹರ್ಷಗೊಂಡ ವಿಷ್ಣುವರ್ಧನನು ಉತ್ಸಾಹದಿಂದ ರಾಜ್ಯ ವಿಸ್ತರಣೆಗೆ ತೊಡಗಿದನು. ತನ್ನ ರಾಜ್ಯದ ಗಡಿಗಳನ್ನು ದಾಟಿ ಶಾಂತಾರರನ್ನು, ಸಿಂದರನ್ನು, ಕದಂಬರನ್ನು ಮತ್ತು ಉಚ್ಚಂಗಿ ಪಾಂಡ್ಯರನ್ನು ಯುದ್ಧಗಳಲ್ಲಿ ಸೋಲಿಸಿ ಅವರಿಂದ ಕಾಣಿಕೆಯನ್ನು ಪಡೆದನು. ವಿಕ್ರಮಾದಿತ್ಯನ ಉತ್ತರಾಧಿಕಾರಿಯಾಗಿದ್ದ ಭೂಲೋಕಮಲ್ಲನು ಅಸಮರ್ಥನಾಗಿದ್ದುದಲ್ಲದೆ ಸಾಮ್ರಾಜ್ಯದ ಶತ್ರುಗಳು ಮತ್ತು ಮಾಂಡಲೀಕರಿಂದ ಪ್ರಾರಂಭವಾಗಿದ್ದ ಗೊಂದಲಮಯ ಪರಿಸ್ಥಿತಿ ಯಲ್ಲಿದ್ದನು. ವಿಷ್ಣುವರ್ಧನನು ರಾಜ್ಯ ವಿಸ್ತರಿಸಲು ಒಳ್ಳೆಯ ಅವಕಾಶ ಉಂಟಾಗಿತ್ತು. ಅವನು ಕ್ರಿ.ಶ. 1137ರ ವೇಳೆಗೆ ತುಂಗಭದ್ರ ನದಿಯ ಪ್ರದೇಶಗಳ ಮೇಲೆ ತನ್ನ ಅಧಿಕಾರ ಸ್ಥಾಪಿಸಿ ಕೃಷ್ಣಾ ನದಿಯ ವರೆವಿಗೂ ದಂಡೆತ್ತಿ

ಹೋದನೆಂದೂ ದಣಿದ ಕುದುರೆಗಳು ಪೆರ್ದೊರೆ (ಪೆದ್ದೊರೆ)ಯಲ್ಲಿ ಜಲಪಾನ ಮಾಡಿದವೆಂದೂ ಶಾಸನಗಳಲ್ಲಿ ವರ್ಣಿಸಲಾಗಿದೆ. ಬನವಾಸಿ, ಹಾನಂಗಲ್, ಹಲಸೀಗೆ ಮತ್ತು ಬೆಳ್ವೊಲ ಪ್ರದೇಶಗಳ ಮೇಲೆ ತನ್ನ ಅಧಿಕಾರ ಸ್ಥಾಪಿಸಿ ಹಾನಂಗಲ್ಲನ್ನು ತನ್ನ ಉಪರಾಜಧಾನಿಯನ್ನಾಗಿ ಮಾಡಿಕೊಂಡನು. ತನ್ನ ವಿಜಯಗಳನ್ನು ಸಾರಲು ಅವನು ಬನವಾಸಿ ಹಾನಂಗಲ್, ಹಲಸೀಗೆ, ಬೆಳುವೊಲ ಮತ್ತು ಬೆಳ್ವೊಲ ಕೊಂಡ ಎಂಬ ಬಿರುದುಗಳನ್ನು ಧರಿಸಿದನು. ಹಲವು ಕಾಲ ತನ್ನ ರಾಜಧಾನಿ ದೋರಸಮುದ್ರದಲ್ಲಿ ಧರ್ಮ ಮತ್ತು ಕಲೆಗೆ ಪ್ರೋತ್ಸಾಹ ನೀಡುತ್ತಾ ಸುಖ ಸಂತೋಷ ವಿನೋದದಿಂದ ಆಡಳಿತ ನಡೆಸುತ್ತಿದ್ದನು. ಪುನಃ 1142ರಲ್ಲಿ ಉಪರಾಜಧಾನಿಯಾದ ಬಂಕಾಪುರದಲ್ಲಿದ್ದನು. ಆ ವೇಳೆಗೆ ವೃದ್ಧಾಪ್ಯವನ್ನು ಸಮೀಪಿಸಿದ್ದ ಅವನು ಅಲ್ಲಿ ಸ್ವರ್ಗಸ್ಥನಾದನು. ವಿಷ್ಣುವರ್ಧನನ ಮಂತ್ರಿಗಳು ರಾಜನ ಕಳೇಬರವನ್ನು ದೋರಸಮುದ್ರಕ್ಕೆ ಸಾಗಿಸಿಕೊಂಡು ಬಂದು ಅಂತ್ಯಕ್ರಿಯೆ ನೆರವೇರಿಸಿ, ಇನ್ನೂ ಬಾಲಕನಾಗಿದ್ದ ಅವನ ಪುತ್ರ ವಿಜಯನರಸಿಂಹನಿಗೆ ಪಟ್ಟಾಭಿಷೇಕ ಮಾಡಿದರು. ಕೀರ್ತಿ ನಾರಾಯಣ ವಿಷ್ಣುವರ್ಧನನ ಆಳ್ವಿಕೆಯು ಕ್ರಿ.ಶ. 1142ರಲ್ಲಿ ಕೊನೆಗೊಂಡಿತು.

ವಿಷ್ಣುವರ್ಧನನ ಆಳ್ವಿಕೆಯು ಧಾರ್ಮಿಕ ಪುರೋಭಿವೃದ್ಧಿಯ ಕಾಲವಾಗಿತ್ತು. ಜೈನ, ವೈಷ್ಣವ, ಶೈವ ಪಂಥಗಳು ಕನ್ನಡನಾಡಿನಲ್ಲಿ ಪರಸ್ಪರ ಅಭಿವೃದ್ಧಿ ಸ್ಥಿತಿಯಲ್ಲಿದ್ದವು. ವಿಷ್ಣುವರ್ಧನನು ಪ್ರಾರಂಭದಲ್ಲಿ ಜೈನ ಮತಾವಲಂಬಿಯಾಗಿದ್ದನೆಂದೂ ಆನಂತರ ವೈಷ್ಣವ ಪಂಥವನ್ನು ಸ್ವೀಕರಿಸಿದನೆಂದೂ ಪ್ರತೀತಿಯಾಗಿದೆ. ಈ ಘಟನೆಗೆ ಸಂಬಂಧಿಸಿದಂತೆ ಭಿನ್ನ ಭಿನ್ನ ಹೇಳಿಕೆಗಳಿವೆ. ಒಂದು ಐತಿಹ್ಯದ ಪ್ರಕಾರ ಅವನ ಕುಮಾರಿಯಾದ ಹರಿಯಲದೇವಿಯು ಕ್ರೂರ ಗ್ರಹ ದೋಷದಿಂದ ನರಳುತ್ತಿದ್ದಳೆಂದೂ ಅವಳ ರೋಗವನ್ನು ಗುಣಪಡಿಸಲು ಜೈನಯತಿಗಳು ಮಾಡಿದ ಪ್ರಯತ್ನವೆಲ್ಲಾ ನಿರರ್ಥಕವಾಯಿತೆಂದೂ, ಹಾಗೂ ಆ ವೇಳೆಗೆ ಕನ್ನಡನಾಡಿಗೆ ಆಗಮಿಸಿದ ಶ್ರೀರಾಮಾನುಜಾಚಾರ್ಯರು ತಮ್ಮ ಆಧ್ಯಾತ್ಮಿಕ ಶಕ್ತಿಯಿಂದ ಆ ರೋಗವನ್ನು ಉಪಶಮನ ಗೊಳಿಸಿದರೆಂದೂ, ಅವರ ತಪಶ್ಶಕ್ತಿಗೆ ಮಾರುಹೋದ ವಿಷ್ಣುವರ್ಧನನು ವೈಷ್ಣವ ಪಂಥವನ್ನು ಸ್ವೀಕರಿಸದನೆಂದೂ ತಿಳಿದು ಬರುತ್ತದೆ. ಇನ್ನೊಂದು ಹೇಳಿಕೆಯ ಪ್ರಕಾರ ವಿಷ್ಣುವರ್ಧನನಿಗೆ ಲಕ್ಷ್ಮೀದೇವಿ ಎಂಬ ಶ್ರೀ ವೈಷ್ಣವ ಪಂಥಕ್ಕೆ ಸೇರಿದ ರಾಣಿಯಿದ್ದಳೆಂದೂ, ಅವಳು ಪ್ರಾರಂಭ ದಿಂದಲೂ ತನ್ನ ಗಂಡನನ್ನು ವೈಷ್ಣವ ಮತವನ್ನು ಸ್ವೀಕರಿಸುವಂತೆ ಪ್ರೇರೇಪಿಸುತ್ತಿದ್ದಳೆಂದೂ ಕೊನೆಗೆ ವಿಷ್ಣುವರ್ಧನನು ಶ್ರೀರಾಮಾನುಜಾಚಾರ್ಯರ ಸಂದರ್ಶನವಾದ ಮೇಲೆ ವೈಷ್ಣವ ಧರ್ಮಕ್ಕೆ ಮತಾಂತರ ಹೊಂದಿದನೆಂದೂ ವರ್ಣಿಸಲಾಗಿದೆ. ಮತ್ತೊಂದು ಐತಿಹ್ಯದ ಪ್ರಕಾರ ವಿಷ್ಣುವರ್ಧನನು ತನ್ನ ಪೂರ್ವಿಕರಂತೆ ಮೊದಲಿಗೆ ಜೈನನಾಗಿದ್ದನೆಂದೂ, ಯುದ್ಧವೊಂದರಲ್ಲಿ ತನ್ನ ಬೆರಳೊಂದನ್ನು ಕಳೆದುಕೊಂಡಿದ್ದರಿಂದ ಸಹಧರ್ಮಿಯರು ಅವನೊಡನೆ ಸಹ ಭೋಜನ ನಿರಾಕರಿಸಿದರೆಂದೂ ಇದರಿಂದ ಖೇದಗೊಂಡ ರಾಜನು ಕನ್ನಡನಾಡಿಗೆ ರಾಮಾನುಜರು ಬಂದ ಮೇಲೆ ವೈಷ್ಣವ ಮತಕ್ಕೆ ಸೇರಿದನೆಂದೂ ಹೇಳಲಾಗಿದೆ.

ವಿಷ್ಣುವರ್ಧನನಿಗೆ ಮೊದಲು 'ಬಿಟ್ಟಿ' ಎಂಬೆಸರಿತ್ತೆಂದೂ ವೈಷ್ಣವ ಮತಕ್ಕೆ ಸೇರಿದ ಮೇಲೆ ವಿಷ್ಣುವರ್ಧನ ಎಂಬ ಹೊಸ ನಾಮಾಂಕಿತವಾಯಿತೆಂಬ ಅಭಿಪ್ರಾಯವಿದ್ದರೂ ಬಿಟ್ಟ ವಿಠ್ಠಲ-ವಿಷ್ಣು ಎಂಬುದು ರೂಪಾಂತರವೆಂಬುದು ನಿಜ. ಅವನಿಗೆ ಮೊದಲಿನಿಂದಲೂ ವಿಷ್ಣುವರ್ಧನ ಎಂಬ ಹೆಸರಿತ್ತೆದು ಹೇಳಲು 1096ರ ಶಾಸನ ನಿದರ್ಶನವಾಗಿದೆ. ಶ್ರೀರಂಗಪಟ್ಟಣದ ಬೆಳಗೊಳದ ಸುತ್ತಮುತ್ತಲ ಪ್ರದೇಶಕ್ಕೆ ಪ್ರಾಂತ್ಯಾಧಿಕಾರಿಯಾಗಿದ್ದಾಗ ಅವನು ವಿಷ್ಣುವರ್ಧನನೆಂದು ಪ್ರಖ್ಯಾತಿ ಪಡೆದಿದ್ದನು. ಅವನ ಮತಾಂತರದ ವಿಷಯಕ್ಕೆ ಸಂಬಂಧಿಸಿದ ವಿಭಿನ್ನ ಹೇಳಿಕೆಗಳ ಮುಖ್ಯ ಕಾರಣವೆಂದರೆ ಶ್ರೀರಾಮಾನುಜರನ್ನು ಗೌರವಿಸಿ, ಅವನು ವೈಷ್ಣವ ಮತವನ್ನು ಸ್ವೀಕರಿಸಿದುದು ಅದರ ಅನುಯಾಯಿಗಳು ತರುವಾಯ ಈ ಕಟ್ಟುಕಥೆಗಳನ್ನು ಹೆಣೆದಿದ್ದಾರೆ. ಎಲ್ಲಕ್ಕೂ ಮಿಗಿಲಾಗಿ ಮತಾಂತರಕ್ಕೆ ಸಂಬಂಧಿಸಿದಂತೆ ಸಮಕಾಲೀನ ದಾಖಲೆಗಳಲ್ಲಿ ಯಾವ ವಿಧವಾದ ಗೊಂದಲವೂ ಕಾಣಬರುವುದಿಲ್ಲ.

ಮತ್ತೆ ಕೆಲವು ವಿಪರ್ಯಾಸ ಪೂರ್ವಕ ಹೇಳಿಕೆಗಳೆಂದರೆ ವಿಷ್ಣುವರ್ಧನನು ವೈಷ್ಣವ ಮತಕ್ಕೆ ಮತಾಂತರ ಹೊಂದಿದ ಮೇಲೆ ಜೈನಬಸದಿಗಳನ್ನು ನಾಶಗೊಳಿಸಿ ಆ ಸಾಮಗ್ರಿಗಳಿಂದಲೇ ವೈಷ್ಣವ ದೇವಾಲಯಗಳನ್ನು ನಿರ್ಮಾಣ ಮಾಡಿದನೆಂಬ ಹೇಳಿಕೆ ನಿಜಕ್ಕೂ ಹಾಸ್ಯಾಸ್ಪದವಾದುದು. ಇದಕ್ಕೆ ಯಾವ ಶಾಸನಾಧಾರಗಳೂ ಇಲ್ಲ. ತನ್ನ ಅರಮನೆಗೆ ಸ್ವಲ್ಪ ದೂರದಲ್ಲೇ ಜೈನ ಬಸದಿಗಳನ್ನು ನಿರ್ಮಿಸಿದುದು ಮತ್ತು ಜಿನಾಲಯಗಳ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸುತ್ತಿದ್ದುದು ಅವನು ಜೈನ ಮತವನ್ನು ಕಡೆಗಾಣಿಸಲಿಲ್ಲ ಎಂಬುದಕ್ಕೆ ನಿದರ್ಶನಗಳಾಗಿವೆ. ಅಲ್ಲದೆ ಅವನ ಪಟ್ಟದ ರಾಣಿ ಶಾಂತಲಾದೇವಿ, ದಂಡನಾಯಕರಾದ ಗಂಗರಾಜ, ಹುಲ್ಲ, ಪುಣಿಸ, ಬಾಹುಬಲಿ, ಮೊದಲಾದವರು ಜಿನೋಪಾಸಕರಾಗಿದ್ದರು. ಜೈನ ಮತೀಯ ದಂಡನಾಯಕನೊಬ್ಬನ ಹಸುಗೂಸನ್ನು ತಾನೇ ಸಾಕಿ ಜೈನ ವಿಧಿಯಂತೆ ಉಪನಯನ, ಇತರ ಸಂಸ್ಕಾರಗಳನ್ನು ನೆರವೇರಿಸಿ ಮುಂದೆ ದಂಡನಾಯಕನನ್ನಾಗಿ ವಿಷ್ಣುವರ್ಧನನು ನೇಮಿಸಿಕೊಂಡಿದ್ದನು. ಅನೇಕ ಜೈನ ಕವಿಗಳೂ ವಿದ್ವಾಂಸರೂ, ವಿಷ್ಣುವರ್ಧನನ ಆಸ್ಥಾನವನ್ನು ಅಲಂಕರಿಸಿದ್ದರು. ಆದ್ದರಿಂದ ವಿಷ್ಣುವರ್ಧನನು ಮತೀಯ ಸಂಕುಚಿತ ಭಾವನೆಯನ್ನು ಹೊಂದಿರಲಿಲ್ಲ ಎಂಬುದು ನಿಸ್ಸಂದೇಹ.

ವಿಷ್ಣುವರ್ಧನನು ಕಲೆ ಮತ್ತು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದ್ದನು. ಭವ್ಯ ದೇವ ಮಂದಿರಗಳು ನಿರ್ಮಾಣವಾದುವು. ಬೇಲೂರಿನ ಚೆನ್ನಕೇಶವ, ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯ ತೊಣ್ಣೂರಿನ ನಾರಾಯಣ, ತಲಕಾಡಿನ ಕೀರ್ತಿ ನಾರಾಯಣ, ದೋರಸಮುದ್ರದ ಹೊಯ್ಸಳೇಶ್ವರ ಮೊದಲಾದುವು ಇವನ ಕಾಲದಲ್ಲಿ ನಿರ್ಮಾಣವಾದವು. ಸಾಮಾಜಿಕ ನೆಮ್ಮದಿಗಾಗಿ ವ್ಯಾಪಾರ, ವ್ಯವಸಾಯವನ್ನು ಪ್ರೋತ್ಸಾಹಿಸಿದನು. ಕೆರೆಕಟ್ಟೆಗಳು ನಿರ್ಮಾಣವಾದವು. ಜ್ಞಾನಾಭಿವೃದ್ಧಿ ಗಾಗಿ ಮತ್ತು ಬ್ರಾಹ್ಮಣರ ಸಂರಕ್ಷಣೆಗಾಗಿ ಹಲವಾರು

ಅಗ್ರಹಾರಗಳನ್ನು ನಿರ್ಮಿಸಿದನು. ನಾಗವರ್ಮ ಕಂತಿ ಮೊದಲಾದ ವಿದ್ವನ್ಮಣಿಗಳು ಇವನ ಆಸ್ಥಾನದಲ್ಲಿದ್ದರು.

ವಿಷ್ಣುವರ್ಧನನು ಸಮರ್ಥ ಯೋಧ ಮಾತ್ರವಲ್ಲದೆ ದಕ್ಷ ಆಡಳಿತಗಾರನೂ ಆಗಿದ್ದನು. 'ಪಂಚ ಪ್ರಧಾನ' ರೆಂದು ಅವನ ಮಂತ್ರಿ ಮಂಡಲಕ್ಕೆ ಹೆಸರಾಗಿತ್ತು. ಕೇಂದ್ರೀಯ, ಪ್ರಾಂತೀಯ ಮತ್ತು ಸ್ಥಳೀಯ ಆಡಳಿತವನ್ನು ಸುವ್ಯವಸ್ಥಿತಿವಾಗಿ ಏರ್ಪಡಿಸಿದನು. ಯುವರಾಜ ಮತ್ತು ಪಟ್ಟದ ರಾಣಿಯರು ಆಡಳಿತದಲ್ಲಿ ಭಾಗವಹಿಸುವ ಏರ್ಪಾಡು ಮಾಡಿದನು. ವೀರರಿಗೆ ದಾನದತ್ತಿಗಳನ್ನು ನೀಡುವ ಪದ್ಧತಿಯನ್ನು ಇಟ್ಟುಕೊಂಡು ಆ ಮೂಲಕ ಅವರಲ್ಲಿ ರಣೋತ್ಸಾಹವನ್ನು ಹೆಚ್ಚಿಸುತ್ತಿದ್ದನು. ರಾಣಿ ಶಾಂತಲಾದೇವಿ, ಅಮಾತ್ಯ ಗಂಗರಾಜ ಆಡಳಿತದಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದರು. ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುತ್ತಿದ್ದರು. ಕಲಿಯುಗ ಪಾರ್ಥ, ಕೀರ್ತಿ ನಾರಾಯಣ, ವಿಕ್ರಮಗಂಗ, ತಲಕಾಡುಗೊಂಡ, ನೊಳಂಬವಾಡಿಗೊಂಡ, ಮಲೆಪೆರು ಗಂಡ ಎಂಬ ಬಿರುದುಗಳನ್ನು ವಿಷ್ಣುವರ್ಧನನು ಧರಿಸಿದ್ದನು. ಶೌರ್ಯ, ಪರಾಕ್ರಮ, ರಣೋತ್ಸಾಹ, ಸ್ವಾತಂತ್ರ್ಯ ಪ್ರಿಯತೆ, ರಾಜ್ಯ ವಿಸ್ತರಣೆ, ದಕ್ಷ ಆಡಳಿತ, ಪ್ರಜಾವಾತ್ಸಲ್ಯ, ಅನುಕರಣೀಯ ಧಾರ್ಮಿಕ ನೀತಿ, ಕಲೆ ಮತ್ತು ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ ಮೊದಲಾದ ಮಹಾತ್ಸಾಧನೆಗಳಿಂದ ವಿಷ್ಣುವರ್ಧನನು ಹೊಯ್ಸಳ ಸಂತತಿಯ ಅಷ್ಟೇಕೆ ಕನ್ನಡನಾಡಿನ ಅತಿಮುಖ್ಯ ಕೀರ್ತಿಶೇಷ ಪ್ರಭುಗಳಲ್ಲಿ ಒಬ್ಬನಾಗಿದ್ದಾನೆ.

**ಒಂದನೇ ನರಸಿಂಹ (1143-1172)**

ವಿಷ್ಣುವರ್ಧನನು 1142ರಲ್ಲಿ ಸ್ವರ್ಗಸ್ಥನಾದ ಮೇಲೆ ಅವನ ಮಂತ್ರಿಗಳು ಇನ್ನೂ ಬಾಲಕನಾಗಿದ್ದ ವಿಜಯನರಸಿಂಹನಿಗೆ ಪಟ್ಟ ಕಟ್ಟಿ ಪ್ರಾಪ್ತ ವಯಸ್ಕನಾಗುವವರೆಗೂ ನಿಷ್ಠೆಯಿಂದ ಆಡಳಿತ ಮುಂದುವರಿಸಿಕೊಂಡು ಹೋದರು. ವಿಷ್ಣುವರ್ಧನನಿಂದ ಪರಾಜಿತರಾಗಿದ್ದ ಹೊಯ್ಸಳ ಶತ್ರುಗಳು ನರಸಿಂಹನ ಕಾಲದಲ್ಲಿ ಚುರುಕಾದರು. ಕಲ್ಯಾಣದ ಚಾಳುಕ್ಯರು ಹೊಯ್ಸಳರನ್ನು ಸೋಲಿಸಿ ನರಸಿಂಹನು ಪುನಃ ತಮ್ಮ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದರು. ತುಂಗಭದ್ರ ನದಿಯ ಪ್ರದೇಶಗಳು ಕೈಬಿಟ್ಟು ಹೋದವು. ನರಸಿಂಹನು ಪ್ರಾಪ್ತ ವಯಸ್ಕನಾದ ಮೇಲೆ ಅಧಿಕಾರವನ್ನು ವಹಿಸಿಕೊಂಡನು. ಸುಖಲೋಲುಪ್ತನೂ, ವಿಲಾಸಪ್ರಿಯನೂ ಆದ ನರಸಿಂಹನು ತಂದೆಯಂತೆ ದಕ್ಷನಾಗಿರಲಿಲ್ಲ. ರಾಜ್ಯ ವಿಸ್ತರಣೆಗೆ ಆಸಕ್ತಿ ತೋರಲಿಲ್ಲ. 1156ರಲ್ಲಿ ಕಲ್ಯಾಣದಲ್ಲಿ 'ರಕ್ತಹಿತ ವಿಪ್ಲವ' ನಡೆಯಿತು. ಕಲ್ಯಾಣಿ ಚಾಳುಕ್ಯರ ಬಲ ಕುಗ್ಗಿತ್ತು. ಕಳಚೂರಿ ಬಿಜ್ಜಳನು ಚಾಳುಕ್ಯ ಸಿಂಹಾಸನವನ್ನು ಆಕ್ರಮಿಸಿ ಕಳಚೂರಿ ಸಂತತಿಯನ್ನು ಸ್ಥಾಪಿಸಿದನು. ಇಂತಹ ಸಂದರ್ಭದಲ್ಲಿ ಹೊಯ್ಸಳರ ಪ್ರಭಾವವನ್ನು ಔನ್ನತ್ಯಕ್ಕೇರಿಸುವ ಅವಕಾಶಗಳಿದ್ದರೂ ನರಸಿಂಹನು ಆಲಸ್ಯದಿಂದ ಅಸಡ್ಡೆ ತೋರಿ ವ್ಯರ್ಥವಾಗಿ ಕಾಲ ಕಳೆದನು. ತನ್ನ ರಾಜ್ಯವನ್ನು ವಿಸ್ತರಿಸುವುದಿರಲಿ ತನ್ನ

ಗಡಿಗಳೇ ಪರಾಕ್ರಮಣಗಳಿಗೆ ತುತ್ತಾದವು. ವಿಷ್ಣುವರ್ಧನನಿಂದ ಸೋಲನ್ನು ಅನುಭವಿಸಿದ್ದ ಉಚ್ಚಂಗಿಯ ಪಾಂಡ್ಯರು ಪುನಃ ಕಳೆದುಕೊಂಡಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡರು. ಚೆಂಗಾಳ್ವರು ಹೊಯ್ಸಳರ ಮೇಲೆ ಎರಗಿದರು. ಆದರೆ ನರಸಿಂಹನ ದಂಡನಾಯಕರು ಚೆಂಗಾಳ್ವರನ್ನು ಸೋಲಿಸಿದರು. ತುಂಗಭದ್ರ ಪ್ರದೇಶಗಳು ಬಿಜ್ಜಳನ ವಶವಾದುವು. ನರಸಿಂಹನ ದಂಡನಾಯಕರು ನಿಷ್ಠೆಯಿಂದ ಹೋರಾಡಿ ಇನ್ನೂ ಹೆಚ್ಚು ಪ್ರದೇಶಗಳು ಬಿಜ್ಜಳನ ವಶವಾಗದಂತೆ ತಡೆದರು.

ವಿಷಯಲಂಪಟನಾದ ನರಸಿಂಹನ ಆರೋಗ್ಯ ಕ್ರಮೇಣ ಕೆಡುತ್ತಾ ಬಂತು. ಆಡಳಿತದಲ್ಲಿ ಅನಾಸಕ್ತನಾಗಿ, ಪಟ್ಟದ ರಾಣಿ ಏಚಲದೇವಿ ಮತ್ತು ಯುವರಾಜ, ಕುಮಾರ ಬಲ್ಲಾಳರನ್ನು ಆಡಳಿತದಲ್ಲಿ ನೇಮಿಸಿಕೊಂಡು ತಾನು ಮಾತ್ರ ಅಧಿಕಾರಕ್ಕೆ ಅಂಟಿಕೊಂಡಿದ್ದನು. ಅವನ ಆಳ್ವಿಕೆಯ ಸಂಧ್ಯಾಕಾಲದಲ್ಲಿ ರಾಜ್ಯದಲ್ಲಿ ಗೊಂದಲಮಯ ಪರಿಸ್ಥಿತಿ ತಲೆದೋರಿತು. ರಾಜ್ಯ ರಕ್ಷಣೆಯ ದೃಷ್ಟಿಯಿಂದ ಕುಮಾರ ಬಲ್ಲಾಳನು ತಂದೆಯ ವಿರುದ್ಧ ಸಿಡಿದೆದ್ದು ಅಧಿಕಾರ ವಹಿಸಿಕೊಂಡನು. ನರಸಿಂಹನು 1173ರ ಆದಿ ಭಾಗದಲ್ಲಿ ಮರಣ ಹೊಂದಿದನು.

**ಇಮ್ಮಡಿ ವೀರಬಲ್ಲಾಳ (1173-1220)**

ಬಲ್ಲಾಳನು ಚಿಕ್ಕ ವಯಸ್ಸಿನಲ್ಲಿಯೇ ತನ್ನ ತಾತನಾದ ವಿಷ್ಣುವರ್ಧನನ ಗುರಿಯಾಗಿದ್ದ ಸಾಮ್ರಾಜ್ಯ ಸ್ಥಾಪನೆಯನ್ನು ಸಾಧಿಸುವ ಸಂಕಲ್ಪ ಮಾಡಿದನು. ಇವನ ಆಳ್ವಿಕೆ ಕನ್ನಡನಾಡಿನ ಇತಿಹಾಸದಲ್ಲಿ ಬಹುಮುಖ್ಯ ಘಟನಾವಳಿಗಳಿಂದ ಕೂಡಿದೆ. ಇವನ ಆಳ್ವಿಕೆಯಲ್ಲಿ ಕಲ್ಯಾಣಿ ಚಾಳುಕ್ಯ ಮತ್ತು ಕಳಚೂರಿ ಮನೆತನಗಳು ಇತಿಹಾಸದಿಂದ ನಿರ್ಗಮಿಸಿದವು. ಸೇವುಣರ ವಿಸ್ತರಣಾ ನೀತಿಯನ್ನು ಕುಂಟಿತಗೊಳಿಸಿದನು. ಪಾಂಡ್ಯರ ಆಕ್ರಮಣದಿಂದ ಚೋಳರಿಗೆ ಪುನಃ ಸಿಂಹಾಸನ ದೊರಕಿಸಿಕೊಟ್ಟು 'ಚೋಳರಾಜ್ಯ ಪ್ರತಿಷ್ಟಾಪನಾಚಾರ್ಯ' ಎಂಬ ಬಿರುದು ಧರಿಸಿದನು. ಬಲ್ಲಾಳನ ಪರಾಕ್ರಮದಿಂದ ಹೊಯ್ಸಳ ರಾಜ್ಯವು ವಿಶಾಲ ಸಾಮ್ರಾಜ್ಯವಾಗಿ ಮಾರ್ಪಾಡಾಯಿತು. ಸಕಲ ಶತ್ರುಗಳನ್ನು ಮರ್ದಿಸಿ ದಕ್ಷಿಣ ಭಾರತದಲ್ಲಿ ಹೊಯ್ಸಳ ರಾಜ್ಯವನ್ನು ಅಜೇಯ ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದನು. ವೀರಬಲ್ಲಾಳನ ಪ್ರೋತ್ಸಾಹದಿಂದ ವ್ಯವಸಾಯ ವ್ಯಾಪಾರವು ಪ್ರಗತಿಪಥದಲ್ಲಿದ್ದವು. ಅನೇಕ ಸುಂದರ ದೇವಮಂದಿರಗಳು ನಿರ್ಮಾಣವಾದವು.

ಅಧಿಕಾರ ವಹಿಸಿಕೊಂಡ ಕೂಡಲೇ ರಾಜ್ಯದಲ್ಲಿದ್ದ ಅರಾಜಕತೆಯನ್ನು ಹೋಗಲಾಡಿಸಿ ರಾಜ್ಯ ವಿಸ್ತರಣಾ ಕಾರ್ಯದಲ್ಲಿ ತೊಡಗಿದನು. ಸಮರ್ಥರಾದ ವ್ಯಕ್ತಿಗಳನ್ನು ಮಂತ್ರಿ ಮತ್ತು ದಂಡ ನಾಯಕರಾಗಿ ನೇಮಿಸಿಕೊಂಡು ತನ್ನ ಗುರಿಯಾದ ಹೊಯ್ಸಳ ಸಾಮ್ರಾಜ್ಯವನ್ನು ಸ್ಥಾಪಿಸಲು ಕಾರ್ಯೋನ್ಮುಖನಾದನು. ವಿಷ್ಣುವರ್ಧನನ ಕಾಲದಲ್ಲಿ ಸಾಮಂತರಾಗಿದ್ದ ಅನೇಕ ಸಣ್ಣಪುಟ್ಟ ರಾಜರು ನರಸಿಂಹನ ಕಾಲದಲ್ಲಿ ಸ್ವತಂತ್ರರಾದರು. ಕೊಡಗಿನ ಚೆಂಗಾಳ್ವರು

ನರಸಿಂಹನ ಕಾಲದಲ್ಲಿ ಸ್ವತಂತ್ರರಾದರು. ಯುದ್ಧ ಅನಿವಾರ್ಯವಾಗಿ ಬಲ್ಲಾಳನ ದಂಡನಾಯಕ ಬೆಟ್ಟರಸನು ಕ್ರಿ.ಶ. 1173ರಲ್ಲಿ ಚೆಂಗಾಳ್ವರನ್ನು ಸೋಲಿಸಿದನು. ಆದರೆ ಮತ್ತೆ ಕೆಲವು ದಿನಗಳಲ್ಲಿ ಚೆಂಗಾಳ್ವರು ಬೆಟ್ಟರಸನ ಸೈನ್ಯವನ್ನು ಮುತ್ತಿದರು. ತಕ್ಷಣವೇ ವೀರಬಲ್ಲಾಳನು ಬೆಟ್ಟರಸನ ಸಹಾಯಕ್ಕೆ ಹೆಚ್ಚು ಸೈನ್ಯ ಕಳುಹಿಸಿದನು. ಚೆಂಗಾಳ್ವರು ಬಲ್ಲಾಳನ ಪರಮಾಧಿಕಾರವನ್ನು ಒಪ್ಪಿಕೊಳ್ಳಬೇಕಾಯಿತು. ಚೆಂಗಾಳ್ವ ರಾಜಕುಮಾರಿಯನ್ನು ಬಲ್ಲಾಳನು ವರಿಸಿದನೆಂದು ತಿಳಿದುಬರುತ್ತದೆ.

ಅನಂತರ ಅಭೇದ್ಯ ಕೋಟೆಯಾಗಿದ್ದ ಉಚ್ಛಂಗಿಗೆ ಲಗ್ಗೆ ಹಾಕಲು, ಎಮ್ಮೆಗನೂರು ಎಂಬಲ್ಲಿ ಪಾಂಡ್ಯರ ಸೇನೆಯನ್ನು ಸೋಲಿಸಿ ರಾಜಧಾನಿಗೆ ಕ್ರಿ.ಶ. 1177ರಲ್ಲಿ ಮುತ್ತಿಗೆ ಹಾಕಿದನು. ಪಾಂಡ್ಯರಾಜ ಕಾಮದೇವನು ಸೋತು ಶರಣಾದನು. ಹೇರಳ ಕಪ್ಪಕಾಣಿಕೆಯನ್ನು ಪಡೆದು "ಪಾಂಡ್ಯರಾಜ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದು ಧರಿಸಿದನು. ಶನಿವಾರಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದುಗಳನ್ನು ಸಹ ವಹಿಸಿದನು. ಅನಂತರ ಪೊಟ್ಟಿ ಪೊಂಬುರ್ಚದ ಶಾಂತಾರರನ್ನು, ಹಾನಂಗಲ್ಲಿನ ಕದಂಬರನ್ನು ತುಳುರಾಜನನ್ನು ಸೋಲಿಸಿದನು. ಆ ವೇಳೆಗೆ ಚಾಳುಕ್ಯರ ಸಾಮಂತ ಪಕ್ಷವನ್ನು ವಹಿಸಿದ್ದ ಉಚ್ಛಂಗಿಯ ಕಾಮದೇವನನ್ನು ಪುನಃ ಸದೆ ಬಡಿಯಬೇಕಾಯಿತು. ಈ ವಿಜಯ ಸ್ಮರಣೆಗಾಗಿ 'ಪಾಂಡ್ಯರಾಜ ನಿರ್ಮೂಲನ' ಎಂಬ ಬಿರುದನ್ನು ಧರಿಸಿದನು.

ತನ್ನ ಮಾಂಡಲೀಕರನ್ನು ಸೋಲಿಸಿದ್ದರಿಂದ ಕುಪಿತನಾದ ಕಳಚೂರಿ ಚಕ್ರವರ್ತಿ ಸಂಕಮನು ಕ್ರಿ.ಶ.1180ರಲ್ಲಿ ಬಲ್ಲಾಳನ ವಿರುದ್ಧ ಸೈನ್ಯ ಕಳುಹಿಸಿದನು. ವೀರಬಲ್ಲಾಳನು ಕಳಚೂರಿ ಸೇನೆಗಳನ್ನು ಸೋಲಿಸಿ ಉದ್ರಿಕೋಟೆಯನ್ನು ಆಕ್ರಮಿಸಿದನು. ಸಂಕಮನು ಬಲ್ಲಾಳನೊಡನೆ ಸಂಧಾನಕ್ಕೆ ಒಡಂಬಡಬೇಕಾಯಿತು. ಮುಂಬರಲಿದ್ದ ಒಳ್ಳೆಯ ಅವಕಾಶವನ್ನು ಬಲ್ಲಾಳನು ನಿರೀಕ್ಷಿಸುತ್ತಿದ್ದನು. ಕಳಚೂರಿಗಳನ್ನು ಸೋಲಿಸಿ 1184ರಲ್ಲಿ 3ನೇ ಸೋಮೇಶ್ವರನು ಕೆಲವು ಮಾಂಡಲೀಕರ ಸಹಾಯದಿಂದ ಪುನಃ ಅಧಿಕಾರವನ್ನು ಸ್ಥಾಪಿಸಿದರೂ ಕುಂತಳ ಸಾಮ್ರಾಜ್ಯದ ಅವನತಿಯ ಕುರುಹುಗಳು ಕಂಡುಬಂದವು. ಸೋಮೇಶ್ವರನು ತನಗೆದುರಾಗಿದ್ದ ಶಕ್ತಿಗಳನ್ನು ಹತ್ತಿಕ್ಕುವಷ್ಟು ದಕ್ಷನಾಗಿರಲಿಲ್ಲ. ದಕ್ಷಿಣದಿಂದ ಹೊಯ್ಸಳರು ಚಾಳುಕ್ಯರ ಪರಮಾಧಿಕಾರವನ್ನು ಕಿತ್ತೆಸೆದು ತಮ್ಮ ಸಾಮ್ರಾಜ್ಯ ಸ್ಥಾಪಿಸಲು ಹವಣಿಸುತ್ತಿದ್ದರು. ಕೊನೆಗೆ ವೀರಬಲ್ಲಾಳನು 1189ರಲ್ಲಿ ಕಲ್ಯಾಣಿವರೆಗೂ, ದಂಡೆತ್ತಿ ಹೋಗಿ ಸೋಮೇಶ್ವರನ ಪ್ರಧಾನ ದಂಡನಾಯಕನಾದ ಬ್ರಹ್ಮ ದಂಡೇಶನನ್ನು ಸೋಲಿಸಿದನು. ಸೋಮೇಶ್ವರನ ಬಲಗೈಯಂತಿದ್ದ ಬ್ರಹ್ಮ ದಂಡನಾಯಕನು ಸೋತ ಮೇಲೆ ದಿಕ್ಕುತೋಚದ ಚಾಳುಕ್ಯ ದೊರೆ ತಲೆಮರೆಸಿಕೊಂಡನು. ಬಲ್ಲಾಳನು ಚಾಳುಕ್ಯ ಸಾಮ್ರಾಜ್ಯದ ದಕ್ಷಿಣ ಭಾಗದ ಮೇಲೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿ 'ಕರ್ನಾಟಕ ಚಕ್ರವರ್ತಿ' ಎಂಬ ಬಿರುದನ್ನು ವಹಿಸಿದನು.

ಅನಂತರ ಕುಂತಳದ ಒಡೆತನಕ್ಕಾಗಿ ದೇವಗಿರಿಯ ಸೇವುಣರಿಗೂ ಹೊಯ್ಸಳರಿಗೂ ಯುದ್ಧಗಳು ಪ್ರಾರಂಭವಾದವು. ಸೇವುಣರಾಜ 5ನೇ ಭಿಲ್ಲಮ್ಮನು ವೀರಬಲ್ಲಾಳನಂತೆ ಸಮರ್ಥನೂ, ಪರಾಕ್ರಮಿಯೂ, ದಕ್ಷನೂ ಆಗಿದ್ದನು. ಭಿಲ್ಲಮ್ಮನು 1190ರಲ್ಲಿ ಕಲ್ಯಾಣಿಯನ್ನು ಆಕ್ರಮಿಸಿ ಧಾರವಾಡ ಜಿಲ್ಲೆಯ ಸೊರಟೂರಿನವರೆಗೂ ಮುಂದುವರಿದನು. ಆ ವೇಳೆಗೆ ಬಲ್ಲಾಳನು ಭಿಲ್ಲಮನನ್ನು ಎದುರಿಸಲು ಸೈನ್ಯದೊಡನೆ ಸಜ್ಜಾದನು. ಧಾರವಾಡ ಜಿಲ್ಲೆಯ ಸೊರಟೂರಿನ ಬಳಿಯಲ್ಲಿ ಭೀಕರ ಕದನ ನಡೆಯಿತು. ವೀರಬಲ್ಲಾಳನೇ ಸೈನ್ಯದ ಮುಖಂಡತ್ವವನ್ನು ವಹಿಸಿದ್ದನು. ಭಿಲ್ಲಮನ ಸೈನ್ಯವು ಅಸಂಖ್ಯಾತ ಸೈನಿಕರಿಂದಲೂ ಚದುರಂಗ ಬಲದಿಂದಲೂ ಕೂಡಿತ್ತು. ಬಲ್ಲಾಳನು ಶತ್ರು ಸೈನ್ಯದ ಮುಖ್ಯ ದಂಡನಾಯಕ ಜೈತುಗಿಯನ್ನು ಕೊಂದನು. ಸೇವುಣ ಬಲವು ಹೊಡೆತಗಳನ್ನು ತಾಳಲಾರದೆ ರಕ್ಷಣೆಗಾಗಿ ಓಡಿತು. ಸೇವುಣ ಭಿಲ್ಲಮನು ಪ್ರಾಣ ರಕ್ಷಣೆಗಾಗಿ ರಣರಂಗದಿಂದ ಸೈನ್ಯದೊಡನೆ ಲೊಕ್ಕಿ ಗುಂಡಿಕೋಟೆ ಸೇರಿದನು. ಹೊಯ್ಸಳ ಸೈನ್ಯವು ಲೊಕ್ಕಿಗುಂಡಿಯ ಕೋಟೆಗೆ ನುಗ್ಗಿತು. ಸೇವುಣ ಸೈನ್ಯ ಪುನಃ ಸೋತಿತು. ಸಮಕಾಲೀನ ಕವಿಯಾದ ರಾಜಾಧಿತ್ಯನು ತನ್ನ ವ್ಯವಹಾರ ಗಣಿತದಲ್ಲಿ ಸೇವುಣ ಸೈನ್ಯದಲ್ಲಿ ಅಪಾರ ಸಾವು ನೋವುಗಳುಂಟಾದವು ಎಂದು ಉಲ್ಲೇಖಿಸಿದ್ದಾನೆ. ಸೋತು ಪಲಾಯನ ಮಾಡುತ್ತಿದ್ದಾಗ ಭಿಲ್ಲಮನು ಬಲ್ಲಾಳನಿಂದ ಹತನಾದನು. ಕೃಷ್ಣಾ ನದಿಯವರೆವಿಗೂ ಶತ್ರುವನ್ನು ಬೆನ್ನಟ್ಟಿ ಅಲ್ಲಿಯವರೆಗಿನ ಪ್ರದೇಶಗಳ ಮೇಲೆ ಬಲ್ಲಾಳನು ತನ್ನ ಆಳ್ವಿಕೆಯನ್ನು ಸ್ಥಾಪಿಸಿದನು.

ಸೊರಟೂರು ಮತ್ತು ಲೊಕ್ಕಿಗುಂಡಿ ಕದನಗಳ ವಿಜಯಗಳಿಂದ ಹೊಯ್ಸಳ ರಾಜ್ಯವು ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ವೀರಬಲ್ಲಾಳನು 'ದಕ್ಷಿಣ ಚಕ್ರವರ್ತಿ' ಎಂಬ ಬಿರುದನ್ನು ವಹಿಸಿದನು. ಈ ಯುದ್ಧದ ಸೋಲಿನಿಂದ ಚೇತರಿಸಿಕೊಳ್ಳಲು ಸೇವುಣರಿಗೆ ಇಪ್ಪತ್ತು ವರ್ಷಗಳು ಬೇಕಾಯಿತು. ಈ ವಿಜಯಗಳ ಕುರುಹಾಗಿ ಬಲ್ಲಾಳನು ಕ್ರಿ.ಶ. 1191 ರಿಂದ 'ಬಲ್ಲಾಳಯುಗ' ಎಂಬ ಹೆಸರಿನಿಂದ ಕಾಲಗಣನೆಯನ್ನು ಆಚರಣೆಗೆ ತಂದನು. ಈ ವಿಜಯದಿಂದ ಹೊಯ್ಸಳರ ಅಧಿಕಾರವು ಬನವಾಸಿ ಹಾನಂಗಲ್, ಬೆಳುವೊಲ, ಹಲಸೀಗೆ ಮೊದಲಾದ ಪ್ರದೇಶಗಳ ಮೇಲೆ ಸ್ಥಾಪಿತವಾಯಿತು. ಹೊಯ್ಸಳ ಸಂತತಿಯ ಪ್ರಭಾವವು ಇಮ್ಮಡಿಯಾಯಿತು. ಅದು ದಕ್ಷಿಣ ಭಾರತದ ಅತ್ಯಂತ ಪ್ರಬಲ ಸಾಮ್ರಾಜ್ಯವಾಗಿ ಮಾರ್ಪಟ್ಟಿತು.

ಕ್ರಿ.ಶ. 1215ರ ಅನಂತರ ಬಲ್ಲಾಳನ ಗಮನ ತಮಿಳುನಾಡಿನತ್ತ ತಿರುಗಿತು. ಬಲ್ಲಾಳನ ಜೀವನದ ಸಂಧ್ಯಾ ಕಾಲದಲ್ಲಿ ಚೋಳರಿಗೂ ಅವರ ಸಾಮಂತರಾದ ಪಾಂಡ್ಯರಿಗೂ ವೈರತ್ವ ಪ್ರಾರಂಭವಾಗಿತ್ತು. ಮೂರನೇ ರಾಜರಾಜನು ಪಾಂಡ್ಯರಿಂದ ಸಿಂಹಾಸನಚ್ಯುತನಾಗಿ ಬಲ್ಲಾಳನ ಸಹಾಯವನ್ನು ಯಾಚಿಸಿದನು. ಬಲ್ಲಾಳನು ಯುವರಾಜ ನರಸಿಂಹನ ನೇತೃತ್ವದಲ್ಲಿ ಹೊಯ್ಸಳ ಸೈನ್ಯವನ್ನು ತಮಿಳುನಾಡಿಗೆ ಕಳುಹಿಸಿದನು. ಅದು ಚೋಳರ ಶತ್ರುವನ್ನು ಸೋಲಿಸಿ

ರಾಜರಾಜನಿಗೆ ಪುನಃ ಸಿಂಹಾಸನವನ್ನು ದೊರೆಕಿಸಿಕೊಟ್ಟಿತು. ರಾಜರಾಜನು ಬಲ್ಲಾಳನಿಗೆ ಹೇರಳ ಕಾಣಿಕೆಯನ್ನು ಸಲ್ಲಿಸಿದನು. ಬಲ್ಲಾಳನು 'ಚೋಳರಾಜ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಧರಿಸಿದನು.

ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಸಾಹಿತ್ಯ ಮತ್ತು ಕಲೆಯಲ್ಲಿ ಅಸಾಧಾರಣ ಪ್ರಗತಿಯಾಯಿತು. ಸುಪ್ರಸಿದ್ಧ ಕವಿಗಳಾದ ಜನ್ನ, ರುದ್ರಭಟ್ಟ, ರಾಜಾದಿತ್ಯ, ವಿದ್ಯಾ ಚಕ್ರವರ್ತಿ ಮೊದಲಾದವರು ವೀರಬಲ್ಲಾಳನ ಸಮಕಾಲೀನರಾಗಿದ್ದರು. ಜನ್ನನಿಗೆ ಬಲ್ಲಾಳನು 'ಉಭಯ ಕವಿಚಕ್ರವರ್ತಿ' ಎಂಬ ಬಿರುದನ್ನು ನೀಡಿ ಗೌರವಿಸಿದನು. ಬಲ್ಲಾಳನ ಮಂತ್ರಿಗಳಾದ ಚಂದ್ರಮೌಳಿ, ಬೂಚಿರಾಜ, ಅಮಿತಯ್ಯ ಮತ್ತಿತರರು ಪಾಂಡಿತ್ಯ ಮತ್ತು ಸಾಹಿತ್ಯದಲ್ಲಿ ವಿಶೇಷ ಅಭಿರುಚಿ ಹೊಂದಿದ್ದರು. ವಿದ್ಯಾಭ್ಯಾಸದ ಪ್ರಗತಿಗಾಗಿ ಅಗ್ರಹಾರಗಳನ್ನು, ಬ್ರಹ್ಮಪುರಿಗಳನ್ನು ಸ್ಥಾಪಿಸಲಾಯಿತು. ಅವನ ದಂಡನಾಯಕ ಎರೆಯಣ್ಣನು ತಿರುಮಕೂಡಲು ನರಸೀಪುರದ ಬಳಿ ಒಂದು ಪಾಠಶಾಲೆ ಯನ್ನು ಸ್ಥಾಪಿಸಿ ಅಲ್ಲಿ ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಬಾಲ ಶಿಕ್ಷಣ ವ್ಯವಸ್ಥೆ ಮಾಡಿದನು. ಪ್ರಜೆಗಳ ಮೇಲ್ಮೆಗಾಗಿ, ಕೃಷಿಯ ಅಭಿವೃದ್ಧಿಗಾಗಿ ಬಲ್ಲಾಳನು ಕೆರೆ, ಕಟ್ಟೆ, ಕಾಲುವೆ ಗಳನ್ನು ನಿರ್ಮಿಸಿದನು, ಕೃಷಿಭೂಮಿಯನ್ನು ವಿಸ್ತರಿಸಿದನು. ವ್ಯಾಪಾರ, ವಾಣಿಜ್ಯಕ್ಕೆ ಪ್ರೋತ್ಸಾಹ ನೀಡಿದನು. ಸ್ಥಳೀಯ ದೊಡ್ಡ ವ್ಯಾಪಾರಿಗಳನ್ನು ಪುರಸಭೆ ಮತ್ತು ನಾಡುಗಳ ಮುಖಂಡರನ್ನಾಗಿ ನೇಮಿಸಿ ಗೌರವಿಸಿದನು. ಹಳೇಬೀಡು, ಬೇಲೂರು, ಆಸಂದಿ, ಬಂಕಾಪುರ, ಭಟ್ಕಳ, ಶ್ರವಣ ಬೆಳಗೊಳ, ಮೇಲ್ಕೋಟೆ, ತಲಕಾಡು ಮತ್ತು ಇತರ ಸ್ಥಳಗಳು ವ್ಯಾಪಾರ ಕೇಂದ್ರಗಳಾಗಿದ್ದವು. ವ್ಯವಸಾಯ, ವ್ಯಾಪಾರಕ್ಕೆ ನೀಡಿದ್ದ ಪ್ರೋತ್ಸಾಹ ಶ್ಲಾಘನೀಯವಾದುದು. ರೈತರ ಅಭಿವೃದ್ಧಿಗಾಗಿ ಸರ್ಕಾರದ ಮತ್ತು ದೇವಾಲಯದ ಖಜಾನೆಯಿಂದ ಮುಂಗಡ ಸಾಲ ನೀಡುವ ಪದ್ಧತಿ ಬಲ್ಲಾಳನ ಕಾಲದಲ್ಲಿ ಆಚರಣೆಯಲ್ಲಿತ್ತೆಂದು ಬೇಲೂರಿನ ಶಾಸನವೊಂದರಿಂದ ತಿಳಿದು ಬರುತ್ತದೆ.

ವೀರಬಲ್ಲಾಳನ ಕಾಲದಲ್ಲಿ ಕಲೆ ವಿಶೇಷ ಪುರೋಭಿವೃದ್ಧಿ ಪಡೆಯಿತು. ವಿಷ್ಣುವರ್ಧನನಿಂದ ನಿರ್ಮಿಸಲ್ಪಟ್ಟ ಬೇಲೂರು ಚೆನ್ನಕೇಶವ ದೇವಾಲಯವನ್ನು ವಿಸ್ತರಿಸಿ ಸುಂದರವಾಗಿ ಮಾಡಿದನಲ್ಲದೆ ಜಾಲಂದ್ರಗಳನ್ನು, ಶಿಲಾಬಾಲಿಕಾ ವಿಗ್ರಹಗಳನ್ನು ವಾಸುದೇವ ತೀರ್ಥವನ್ನು ನಿರ್ಮಿಸಿದನು. ಅವನ ಕಾಲದಲ್ಲಿ ಹಳೇಬೀಡಿನ ಕೇದಾರೇಶ್ವರ, ಅಮೃತಾಪುರದ ಅಮೃತೇಶ್ವರ, ಬೆಳವಾಡಿಯ ವೀರನಾರಾಯಣ, ಅರಸೀಕೆರೆಯ ಈಶ್ವರ ಹಾಗೂ ಸಹಸ್ರಕೂಟ ಜಿನಾಲಯ, ಸಿಂಧಗಟ್ಟದ ಲಕ್ಷ್ಮೀ ನಾರಾಯಣ ಮೊದಲಾದ ದೇವಾಲಯಗಳು ನಿರ್ಮಾಣವಾದವು. ವೀರಬಲ್ಲಾಳನು ವೈಷ್ಣವ ಪಂಥಾವಲಂಬಿಯಾಗಿದ್ದಾಗ್ಯೂ ಜೈನ ಮತ್ತು ಶೈವ ಪಂಥಗಳಿಗೂ ಸಮಾನವಾದ ಪ್ರೋತ್ಸಾಹ ನೀಡಿದನು. ಉದಾರ ನೀತಿಯ ಪ್ರತಿಪಾದಕನಾದ ಬಲ್ಲಾಳ ಪರಾಕ್ರಮ, ಶೌರ್ಯ, ಸಾಮರ್ಥ್ಯಕ್ಕೆ ಆದ್ಯತೆ ನೀಡಿದ್ದನೆಂಬುದಕ್ಕೆ

ಸಮಾಜದ ನಾಲ್ಕನೇ ವರ್ಗದ ಅಮಿತಯ್ಯನನ್ನು ಸಚಿವ ಮತ್ತು ದಂಡನಾಯಕನಾಗಿ ನೇಮಿಸಿಕೊಂಡ ನಿದರ್ಶನವು ಸಾಕ್ಷಿಯಾಗಿದೆ.

ತನ್ನ ಅರ್ಧ ಶತಮಾನದ ವರ್ಣರಂಜಿತ ಆಳ್ವಿಕೆಯಲ್ಲಿ ಹೊಯ್ಸಳ ರಾಜ್ಯವನ್ನು ಸಾಮ್ರಾಜ್ಯವಾಗಿ ಮಾರ್ಪಡಿಸಿ ಹೊಯ್ಸಳರ ಪ್ರಭುತ್ವವನ್ನು ದಕ್ಷಿಣ ಭಾರತದಲ್ಲಿ ಅಜೇಯ ಸಾಮ್ರಾಜ್ಯವಾಗಿ ಮಾಡಿ ಧರ್ಮ, ಸಾಹಿತ್ಯ, ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿ ಪ್ರಜೆಗಳ ಮೇಲ್ಮೆಗೆ ಕಾರಣನಾದ ವೀರಬಲ್ಲಾಳನು ಕ್ರಿ.ಶ. 1220 ರಲ್ಲಿ ಕೀರ್ತಿಶೇಷನಾದನು. ಅವನ ಮರಣ ವಾರ್ತೆಯನ್ನು ತಿಳಿದ ಕೂಡಲೇ ಅವನ ಅನೇಕ ನೆಚ್ಚಿನ ಭಂಟರೂ, ಗರುಡರೂ (ಲೆಂಕರು) ಪ್ರಾಣಾರ್ಪಣೆ ಮಾಡಿಕೊಂಡರು. ಅವರಲ್ಲಿ ಕುವರ ಲಕ್ಷ್ಮನೆಂಬುವನು ಮುಖ್ಯನು. ವೀರಬಲ್ಲಾಳನು ಅನೇಕ ಬಿರುದುಗಳನ್ನು ಹೊಂದಿದ್ದನು. ಮಲೆಪೆರುಗಂಡ, ಗಿರಿದುರ್ಗಮಲ್ಲ, ಶನಿವಾರಸಿದ್ಧಿ, ಛಲದಂಕಮಲ್ಲ, ಸಮಸ್ತಭುವನಾಶ್ರಯ, ಶ್ರೀಪೃಥ್ವೀವಲ್ಲಭ, ಪರಮೇಶ್ವರ, ಪರಮಭಟ್ಟಾರಕ, ಯಾದವ ನಾರಾಯಣ, ತೆಂಕಣ ಚಕ್ರವರ್ತಿ, 'ಗಂಡಬೇರುಂಡ' ಮೊದಲಾದವು ಅವನ ಬಿರುದು ಗಳಾಗಿದ್ದವು. ಕರ್ನಾಟಕ ಚಕ್ರವರ್ತಿಗಳಲ್ಲಿ 'ಗಂಡಬೇರುಂಡ' ಎಂಬ ಬಿರುದನ್ನು ವಹಿಸಿದವರಲ್ಲಿ ವೀರಬಲ್ಲಾಳನೇ ಮೊದಲಿಗನು. ಕರ್ನಾಟಕ ರಾಜಧಾನಿ ವೀರಬಲ್ಲಾಳನಿಂದಲೇ ತನ್ನ ಹೆಸರನ್ನು ಕೀರ್ತಿಯು ತನ್ನ ಉನ್ನತಿಯ ಉತ್ತುಂಗ ಶಿಖರವನ್ನು ಮುಟ್ಟಿತು. ಅವನ ಸಾಧನೆಗಳಿಂದ ಈ ಸಂತತಿಗೆ ಹೊಯ್ಸಳ ಬಲ್ಲಾಳ ಸಂತತಿ ಎಂಬ ಹೆಸರು ರೂಢನಾಮವಾಯಿತು.

### ಎರಡನೇ ನರಸಿಂಹ (ಕ್ರಿ.ಶ. 1220-1235)

ಇಮ್ಮಡಿ ನರಸಿಂಹನನ್ನು ಪ್ರತಾಪ ನರಸಿಂಹ, ವೀರನರಸಿಂಹ ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ನರಸಿಂಹನು ಇಮ್ಮಡಿ ವೀರಬಲ್ಲಾಳನ ಪಟ್ಟದ ರಾಣಿಯಾದ ಪದ್ಮಲದೇವಿಯ ಗರ್ಭದಲ್ಲಿ 1184ರಲ್ಲಿ ಹುಟ್ಟಿದನು. ವೀರನರಸಿಂಹನಿಗೆ ಯುವರಾಜ್ಯಾಭಿಷೇಕವನ್ನು ನೆರವೇರಿಸಿ ಬಾಲ್ಯದಲ್ಲಿ ರಾಜಯೋಗ್ಯವಾದ ಶಿಕ್ಷಣವನ್ನು ಒದಗಿಸಲಾಗಿತ್ತು. ಪ್ರಾಪ್ತ ವಯಸ್ಕನಾದ ಮೇಲೆ ನರಸಿಂಹನು, ವೀರಬಲ್ಲಾಳನು ಕೈಗೊಂಡ ಯುದ್ಧಗಳಲ್ಲಿ ಪಾಲ್ಗೊಂಡು ದಕ್ಷ ಯೋಧನೆನಿಸಿ ಕೊಂಡಿದ್ದನು. ಪ್ರಾಂತ್ಯಾಧಿಕಾರಿಯಾಗಿ ಆಡಳಿತದ ಅನುಭವ ಗಳಿಸಿದ್ದನು. ಯುವ ರಾಜನಾಗಿದ್ದಾಗಲೇ ತಂದೆಯ ಆಜ್ಞೆಯ ಮೇರೆಗೆ ಸೈನ್ಯ ಸಮೇತ ತಮಿಳುನಾಡಿಗೆ ಹೋಗಿ ಚೋಳರ ಶತ್ರುಗಳನ್ನು ಸೋಲಿಸಿ ರಾಜರಾಜನಿಗೆ ಸಿಂಹಾಸನವನ್ನು ದೊರಕಿಸಿಕೊಟ್ಟಿದ್ದನು. ಕ್ರಿ.ಶ. 1220ರಲ್ಲಿ ವೀರಬಲ್ಲಾಳನ ಮರಣದ ನಂತರ ಹೊಯ್ಸಳ ಚಕ್ರವರ್ತಿಯಾದನು.

ನರಸಿಂಹನ ಆಳ್ವಿಕೆಯ ಕಾಲದಲ್ಲಿ ಉತ್ತರದಲ್ಲಿ ದೇವಗಿರಿಯ ಸೇವುಣರು ತಮ್ಮ ಹಿಂದಿನ ಸೋಲಿಗೆ ಸೇಡು ತೀರಿಸಿಕೊಳ್ಳಲು ನಿರಂತರವಾಗಿ ಹವಣಿಸುತ್ತಿದ್ದರು. ದಕ್ಷಿಣದಲ್ಲಿ

ತಮಿಳುನಾಡಿನ ರಾಜಕೀಯವು ಗೊಂದಲಮಯವಾಗಿತ್ತು. ನರಸಿಂಹನು ಅಧಿಕಾರವನ್ನು ವಹಿಸಿದ ಕೂಡಲೇ ತಮಿಳುನಾಡಿಗೆ ಧಾವಿಸಬೇಕಾಯಿತು. ಮಧುರೆಯ ಪಾಂಡ್ಯ ಸಂತತಿಯ ಮಾರವರ್ಮ ಸುಂದರ ಪಾಂಡ್ಯನು ತನ್ನ ಇತರ ಅನುಯಾಯಿಗಳೊಡನೆ ಸೇರಿ ರಾಜರಾಜನನ್ನು ಪುನಃ ಸೋಲಿಸಿದನು. ಪ್ರತಾಪ ನರಸಿಂಹನು ಕೂಡಲೇ ತಮಿಳುನಾಡಿಗೆ ಧಾವಿಸಿ ಪಾಂಡ್ಯ ರಾಜನನ್ನೂ ಅವನ ಮಿತ್ರರನ್ನೂ ಸೋಲಿಸಿ ರಾಜರಾಜನನ್ನು ಸಂತೈಸಿ ಅವನ ಸಿಂಹಾಸನವನ್ನು ಪುನಃ ದೊರಕಿಸಿಕೊಟ್ಟನು. ಆದರೆ ನರಸಿಂಹನು ಹೆಚ್ಚು ಕಾಲ ತಮಿಳುನಾಡಿನಲ್ಲಿರಲು ಅವಕಾಶವಾಗಲಿಲ್ಲ.

ಹೊಯ್ಸಳ ಚಕ್ರವರ್ತಿಯು ತಮಿಳುನಾಡಿಗೆ ಧಾವಿಸಿದ ಅವಕಾಶವನ್ನು ಉಪಯೋಗಿಸಿ ಕೊಂಡು ಸೇವುಣ ರಾಜನು ಪ್ರಬಲ ಸೈನ್ಯದೊಡನೆ ಹೊಯ್ಸಳರ ಉತ್ತರದ ಗಡಿಗಳನ್ನು ಮುತ್ತಿದನು. ಹೊಯ್ಸಳರ ರಾಜಧಾನಿಗೆ ಮುತ್ತಿಗೆ ಹಾಕುವುದು ಸೇವುಣ ರಾಜನ ಗುರಿಯಾಗಿತ್ತು. ಆದರೆ ಸೇವುಣರ ಆಕ್ರಮಣದ ಸುದ್ದಿ ತಿಳಿದ ಕೂಡಲೇ ಇಮ್ಮಡಿ ನರಸಿಂಹನು ತಮಿಳುನಾಡಿನಿಂದ ಧಾವಿಸಿ ಬಂದು ಸೇವುಣರನ್ನು ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ಪ್ರದೇಶದಲ್ಲಿ ಎದುರಿಸಿದನು. ಪ್ರಬಲ ಹೋರಾಟವು ನಡೆದು ಸೇವುಣ ಬಲವು ಸೋತು ಹೋಯಿತು. ಸೇವುಣ ದಂಡನಾಯಕರಾದ ಪಾವುಸ ಮತ್ತು ವಿಕ್ರಮಪಾಲ ಎಂಬುವರು ಯುದ್ಧದಲ್ಲಿ ಮಡಿದರು. ಅಳಿದುಳಿದ ಸೇವುಣ ಬಲವು ಕಂಗೆಟ್ಟು ಓಡಿತು. ಈ ಯುದ್ಧವು ಸುಮಾರು ಕ್ರಿ.ಶ. 1222ರಲ್ಲಿ ನಡೆಯಿತೆಂದು ತಿಳಿದು ಬರುತ್ತದೆ. ನರಸಿಂಹ ಮತ್ತು ಅವನ ದಂಡನಾಯಕ ಅಡ್ಡಾಯದ ಹರಿಹರನು ಸೇವುಣ ಸೈನ್ಯದ ಮೇಲೆ ನಡೆಸಿದ ಅಪ್ರತಿಮ ಹೋರಾಟವನ್ನು ಅನೇಕ ಶಾಸನಗಳು ವರ್ಣಿಸುತ್ತವೆ. ತೀವ್ರ ಸೋಲನ್ನನುಭವಿಸಿದ ಸೇವುಣರು ಪ್ರತಾಪ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಪುನಃ ಯುದ್ಧ ಹೂಡುವ ಸಾಹಸ ಮಾಡಲಿಲ್ಲ.

ಆ ವೇಳೆಗೆ ಪುನಃ ತಮಿಳುನಾಡಿನ ರಾಜಕೀಯವು ಗೊಂದಲಮಯವಾಗಿತ್ತು. ಕ್ರಿ.ಶ. 1224 ರಲ್ಲಿ ಪಾಂಡ್ಯ, ಮಗರ ಮತ್ತು ಕಡವ ಸಂತತಿಗಳ ರಾಜರು ಐಕ್ಯಮತ್ಯದಿಂದ ಯುದ್ಧ ಮಾಡಿ ದುರ್ಬಲನಾದ ಮೂರನೇ ರಾಜರಾಜ ಚೋಳನನ್ನು ಸೋಲಿಸಿದರು. ಅವನು ತಲೆ ತಪ್ಪಿಸಿಕೊಂಡು ಹೋಗುವ ಪ್ರಯತ್ನದಲ್ಲಿದ್ದಾಗ ಅವನನ್ನು ಬಂಧಿಸಲಾಯಿತು. ಪ್ರತಾಪ ನರಸಿಂಹ ಮತ್ತು ಅವನ ದಂಡನಾಯಕರಾದ ಅಪ್ಪಯ್ಯ ಮತ್ತು ಗೋಪಯ್ಯ ಎಂಬುವರು ತಮಿಳುನಾಡಿಗೆ ಹೋಗಿ ಪಾಂಡ್ಯರನ್ನು, ಮಗರ ಮತ್ತು ಇತರ ಮಾಂಡಲಿಕರನ್ನು ಸೋಲಿಸಿ ರಾಜರಾಜನಿಗೆ ಅಧಿಕಾರವನ್ನು ದೊರಕಿಸಿಕೊಟ್ಟರು. ಕಂಚಿಯು ಸ್ವಲ್ಪ ಕಾಲ ನರಸಿಂಹನ ವಶವಾಗಿತ್ತು. ಅವನು ರಾಮೇಶ್ವರದ ವರೆಗೂ ದಂಡೆತ್ತಿ ಹೋಗಿ ವಿಜಯಸ್ತಂಭವನ್ನು ಸ್ಥಾಪಿಸಿದುದಾಗಿ ತಿಳಿದುಬರುತ್ತದೆ. ಆ ವೇಳೆಗೆ ನರಸಿಂಹನ ಸಹೋದರಿಯಾದ ಸೋವಲದೇವಿಯನ್ನು ಮೂರನೇ ರಾಜರಾಜನು ವರಿಸಿದ್ದನು. ಹೊಯ್ಸಳ ಮತ್ತು ಚೋಳ

ರಾಜಮನೆತನಗಳ ಮಧ್ಯೆ ನಿಕಟವಾದ ಬಾಂಧವ್ಯವು ಏರ್ಪಟ್ಟಿತ್ತು. ಪುನಃ 1227ರಲ್ಲಿ ಪಾಂಡ್ಯರಿಂದ ರಾಜರಾಜನು ತೊಂದರೆಗೆ ಗುರಿಯಾದನು. ಆದರೆ ನರಸಿಂಹನು ರಾಜರಾಜನ ಸಹಾಯಕ್ಕೆ ಧಾವಿಸಿದನು. ರಾಜರಾಜನ ಸಂರಕ್ಷಣೆಗಾಗಿ ಒಂದು ಹೊಯ್ಸಳ ಸೈನ್ಯದ ತುಕಡಿಯನ್ನು ತಮಿಳುನಾಡಿನ ಶ್ರೀರಂಗಂ ಬಳಿಯಲ್ಲಿ ಸ್ಥಾಪಿಸಲಾಯಿತು. ಅದರ ವೆಚ್ಚಕ್ಕಾಗಿ ರಾಜ ರಾಜನು ಶ್ರೀರಂಗಂ ಸುತ್ತಮುತ್ತಲಿನ ಫಲವತ್ತಾದ ವಿಶಾಲ ಪ್ರದೇಶವನ್ನು ಹೊಯ್ಸಳರ ಆಳ್ವಿಕೆಗೆ ವಹಿಸಿದನು. ನರಸಿಂಹನ ಪುತ್ರನೂ ಯುವರಾಜನೂ ಆದ ವೀರಸೋಮೇಶ್ವರನು ಅಲ್ಲಿ ಒಂದು ರಾಜಧಾನಿಯನ್ನು ಸ್ಥಾಪಿಸಿಕೊಂಡು ಅಧಿಕಾರ ನಡೆಸುತ್ತಿದ್ದನು. ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವು ವ್ಯಾಪಕವಾಗಿ ವಿಸ್ತರಿಸಿತು.

ಪ್ರತಾಪ ನರಸಿಂಹನು ಸೇವುಣರ ದಾಳಿಯಿಂದ ಸಾಮ್ರಾಜ್ಯವನ್ನು ಸಂರಕ್ಷಿಸಿದನು. ಪುನಃ ಪುನಃ ಸಂಭವಿಸಿದ ಚೋಳ-ಪಾಂಡ್ಯ ಘರ್ಷಣೆಗಳಿಂದ ಮೂರನೇ ರಾಜರಾಜ ಚೋಳನ ಅಧಿಕಾರವು ಚ್ಯುತಿಗಾಣದಂತೆ ಸಂರಕ್ಷಿಸಿದನು. ಪಾಂಡ್ಯರನ್ನು, ಮಗರರನ್ನು ಸದೆ ಬಡಿದನು. ಚೋಳ ರಾಜ್ಯ ಪ್ರತಿಷ್ಠಾಪನಾಚಾರ್ಯ, ಪಾಂಡ್ಯರಾಜ ಗಜಕೇಸರಿ, ಮಗರ ರಾಜ್ಯ ನಿರ್ಮೂಲನ ಎಂಬ ಬಿರುದುಗಳನ್ನು ಧರಿಸಿದನು. ತಮಿಳುನಾಡಿನ ಮೇಲೆ ಹೊಯ್ಸಳರ ರಾಜಕೀಯ ಪ್ರಭಾವವನ್ನು ಯಶಸ್ವಿಯಾಗಿ ಸ್ಥಾಪಿಸಿದನು. ಹರಿಹರ, ಪೊಲ್ವಾಳ, ಅಪ್ಪಯ್ಯ ಮತ್ತು ಗೋಪಯ್ಯ ಎಂಬುವರು ಎರಡನೇ ನರಸಿಂಹನ ಪ್ರಸಿದ್ಧ ಮಂತ್ರಿಗಳೂ ದಂಡನಾಯಕರೂ ಆಗಿದ್ದರು. ಪೊಲಾಳ್ವ, ದಂಡ ನಾಥನು ವೈಷ್ಣವ ಪಂಥಾವಲಂಬಿಯಾಗಿದ್ದು ಹರಿಹರದ ಪ್ರಸಿದ್ಧ ಹರಿಹರೇಶ್ವರ ದೇವಾಲಯವನ್ನು ಕಟ್ಟಿಸಿದನು. ನರಸಿಂಹನ ಆಳ್ವಿಕೆಯ ಕಾಲದಲ್ಲಿ ಬಸರಾಳಿನ ಮಲ್ಲಿಕಾರ್ಜುನ ಬೆಳ್ಳೂರಿನ ಮೂಲ ಸಂಗೇಶ್ವರ, ಹಾರನಹಳ್ಳಿಯ ಕೇಶವ ಮೊದಲಾದ ಇತರ ಪ್ರಸಿದ್ಧ ದೇವಾಲಯಗಳು ನಿರ್ಮಾಣ ವಾದವು. ಅವನಿಗೆ ಸಮಸ್ತಭುವನಾಶ್ರಯ, ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿಕಾಜ ಪರಮೇಶ್ವರ, ನಿಸ್ಸಂಕ ಪ್ರತಾಪ ಚಕ್ರವರ್ತಿ ಮೊದಲಾದ ಬಿರುದುಗಳಿದ್ದವು. ನರಸಿಂಹನು ಕ್ರಿ.ಶ. 1235ರಲ್ಲಿ ಮರಣ ಹೊಂದಿದನು. ಅನಂತರ ಇಮ್ಮಡಿ ನರಸಿಂಹ ಮತ್ತು ಪಟ್ಟಮಹಿಷಿ ಕಾಳಲದೇವಿ ಅವರ ಮಗನಾದ ಸೋಮೇಶ್ವರನು ಪಟ್ಟಕ್ಕೆ ಬಂದನು.

### ವೀರ ಸೋಮೇಶ್ವರ (1236 ರಿಂದ 1255)

ಹೊಯ್ಸಳ ಸೋಮೇಶ್ವರನ ಆಳ್ವಿಕೆಯ ಕಾಲವು ಅನೇಕ ಘಟನಾವಳಿಗಳಿಂದ ಕೂಡಿದೆ. ಅವನು ತಮಿಳುನಾಡಿನ ರಾಜಕೀಯದಲ್ಲಿ ಹೆಚ್ಚು ಶ್ರಮಿಸಬೇಕಾಯಿತು. ಸೇವುಣರ ಆಕ್ರಮಣವನ್ನು ಎದುರಿಸಬೇಕಾಯಿತು. ಕೊನೆಯಲ್ಲಿ ಸಾಮ್ರಾಜ್ಯವನ್ನು ತನ್ನ ಇಬ್ಬರು ಮಕ್ಕಳಿಗೂ ವಿಭಜಿಸಿ ಕೊಡಬೇಕಾಯಿತು. ಪರಿಣಾಮಕಾರಿಯಾದ ಮೇಲ್ಕಂಡ ಘಟನೆಗಳಿಂದ ಸೋಮೇಶ್ವರನ ಆಳ್ವಿಕೆಯು ಪ್ರಮುಖವಾಗಿದೆ. ಹಲವು ವಿದ್ವಾಂಸರ ಪ್ರಕಾರ ಅವನ ಆಳ್ವಿಕೆಯು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವದ ಉತ್ತುಂಗ ಕಾಲವಾಗಿತ್ತು. ಮತ್ತೆ

ಹಲವು ವಿದ್ವಾಂಸರು ವೀರಸೋಮೇಶ್ವರನ ಆಳ್ವಿಕೆಯು ಹೊಯ್ಸಳ ರಾಜರ ಆಳ್ವಿಕೆಯಲ್ಲೆಲ್ಲಾ ಚಿಂತಾಜನಕವಾದುದಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ವೀರಸೋಮೇಶ್ವರನ ತಾಯಿಯು ಅವನು ಇನ್ನೂ ಶಿಶುವಾಗಿದ್ದಾಗಲೇ ತೀರಿಕೊಂಡಳು. ಅವನು ತನ್ನ ಸೋದರತ್ತೆಯಾದ ಸೋವಲದೇವಿಯ ಪಾಲನೆಯಲ್ಲಿ ಕ್ರಿ.ಶ. 1223ರಿಂದ ತಮಿಳು ನಾಡಿನಲ್ಲಿ ಬೆಳೆದನು. ಕ್ರಿ.ಶ. 1228ರಲ್ಲಿ ತನ್ನ ತಂದೆಯಿಂದ ತಮಿಳು ಪ್ರದೇಶದ ಮೇಲ್ವಿಚಾರಣೆಗೆ ನೇಮಕಗೊಂಡನು. ಸೋಮೇಶ್ವರನು ಶ್ರೀರಂಗಂ ಬಳಿಯ ಕಣ್ಣಾನೂರಿನ ಸಮೀಪದಲ್ಲಿ ಹೊಸ ರಾಜಧಾನಿಯನ್ನು ಕಟ್ಟಿ ಅದನ್ನು ವಿಕ್ರಮಪುರ ಎಂದು ಕರೆದನು. ಅಲ್ಲಿ ಸುಂದರವಾದ ಒಂದು ಹೊಯ್ಸಳೇಶ್ವರ ದೇವಾಲಯವನ್ನೂ ಕಟ್ಟಿಸಿದನು. ತಮಿಳುನಾಡಿನ ರಾಜಕೀಯ ಸ್ಥಿತಿಗಳು ಅವನಿಗೆ ಬಾಲ್ಯದಿಂದಲೂ ಚಿರಪರಿಚಿತವಾಗಿದ್ದವು. ಕ್ರಿ.ಶ. 1236ರಲ್ಲಿ ಪ್ರತಾಪ ನರಸಿಂಹನ ಮರಣಾನಂತರ ದೋರಸಮುದ್ರದಲ್ಲಿ ಹೊಯ್ಸಳ ಸಿಂಹಾಸನವನ್ನೇರಿ ಚಕ್ರವರ್ತಿಯಾದನು. ವೀರ ಸೋಮೇಶ್ವರನ ಕಾಲದಲ್ಲಿ ತಮಿಳುನಾಡಿನ ರಾಜಕೀಯವು ಹೊಸ ತಿರುವು ಮುರುವುಗಳಿಂದ ಕೂಡಿ ಪ್ರಕ್ಷುಬ್ಧ ಸ್ಥಿತಿಯುಂಟಾಯಿತು.

ಮೂರನೇ ರಾಜರಾಜ ಚೋಳನು ಮರಣಹೊಂದಿ ಮೂರನೇ ರಾಜೇಂದ್ರ ಚೋಳನು ಚೋಳ ರಾಜನಾದನು. ಮೂರನೇ ರಾಜೇಂದ್ರನು ತೆಲುಗು ಚೋಳ ಗಂಡ ಗೋಪಾಲ ಮತ್ತು ಕಡವ ಕೋಪೆ ರುಂಜುಂಗನೊಡನೆ ಮೈತ್ರಿಯೇರ್ಪಡಿಸಿಕೊಂಡು ಹೊಯ್ಸಳ ಪರಮಾಧಿಕಾರವನ್ನು ಧಿಕ್ಕರಿಸಿದುದಲ್ಲದೆ ಪಾಂಡ್ಯರಾಜನಾದ ಮಾರವರ್ಮನ್ ಸುಂದರ ಪಾಂಡ್ಯನನ್ನು ಸೋಲಿಸಿ ಸ್ವತಂತ್ರವಾಗಿ ಆಳಲು ಆಕ್ರಮಿಸಿದನು ಯುದ್ಧದಲ್ಲಿ ಸೋತ ಮಾರವರ್ಮನ್ ಸುಂದರ ಪಾಂಡ್ಯನು ವೀರಸೋಮೇಶ್ವರನ ಸಹಾಯವನ್ನು ಯಾಚಿಸಿದನು. ಸೋಮೇಶ್ವರನು ರಾಜೇಂದ್ರನನ್ನು ಅವನ ಪಕ್ಷದ ಮಾಂಡಲಿಕರನ್ನು ಸೋಲಿಸಿ ಪಾಂಡ್ಯ ರಾಜನನ್ನು ಸಂತೈಸಿದನು. ಸೋಮೇಶ್ವರನ ಹತ್ತಿರದ ಸಂಬಂಧಿಯಾದ ಪಮ್ಮಿಯಕ್ಕನ್ ಎಂಬುವಳನ್ನು ಮಾರವರ್ಮನು ವರಿಸಿದ್ದನು. ವೀರ ಸೋಮೇಶ್ವರನು, "ಪಾಂಡ್ಯರಾಜ ಸ್ಥಾಪನಾಚಾರ್ಯ", ಮತ್ತು "ಪಾಂಡ್ಯ ಕುಲ ಸಂರಕ್ಷಣಾ ದಕ್ಷಿಣಭುಜ" ಎಂಬ ಬಿರುದನ್ನು ಧರಿಸಿದನು. ಚೋಳ ಮತ್ತು ಪಾಂಡ್ಯ ಸಂತತಿಗಳು ಹೊಯ್ಸಳ ಸಂತತಿಯೊಡನೆ ರಕ್ತ ಸಂಬಂಧವನ್ನೇರ್ಪಡಿಸಿ ಕೊಂಡಿದ್ದವು. ತಿರುಮಾಯಂ ಮತ್ತು ತಿನ್ನವೇಲಿ ಶಾಸನಗಳಲ್ಲಿ ಮೂರನೇ ರಾಜೇಂದ್ರ ಚೋಳನೂ ಮಾರವರ್ಮನ್ ಸುಂದರ ಪಾಂಡ್ಯನೂ ವೀರಸೋಮೇಶ್ವರನನ್ನು "ಮಾಮಾದಿಗಳ್" ಎಂಬುದಾಗಿ ಸಂಭೋದಿಸಿದ್ದಾರೆ. ಕನ್ನಡನಾಡಿನ ಹೆಚ್ಚು ಮಂದಿ ದಂಡನಾಯಕರೂ, ಅಧಿಕಾರಿಗಳೂ ತಮಿಳು ನಾಡಿನಲ್ಲಿ ಆಡಳಿತ ಮತ್ತು ಇತರ ಕಾರ್ಯಗಳಲ್ಲಿ ನಿಯೋಜಿತರಾಗಿದ್ದರು. ಆ ಕಾಲವು ತಮಿಳು ನಾಡಿನಲ್ಲಿ ಹೊಯ್ಸಳರ ಪ್ರಭಾವ ಮತ್ತು ಅಧಿಕಾರದ ಉತ್ತುಂಗಕಾಲವಾಗಿತ್ತು. ಕ್ರಿ.ಶ. 1251 ರವರೆಗೂ ತಮಿಳುನಾಡಿನಲ್ಲಿ ಹೊಯ್ಸಳರ ಅಧಿಕಾರಕ್ಕೆ ಯಾವ ವಿಧವಾದ ಚ್ಯುತಿಯೂ ಒದಗಲಿಲ್ಲ.

ವೀರ ಸೋಮೇಶ್ವರನು ತಮಿಳುನಾಡಿನ ರಾಜಕೀಯದಲ್ಲಿ ತೊಡಗಿದ್ದಾಗ ಹೊಯ್ಸಳ ಸಾಮ್ರಾಜ್ಯದ ಉತ್ತರ ಗಡಿಗಳನ್ನು ಸೇವುಣ ಕೃಷ್ಣಕಾಂಧಾರನು ಮುತ್ತಿದನು. ಅವನು ದೋರ ಸಮುದ್ರವನ್ನು ಮುತ್ತುವ ಹವಣಿಕೆಯಲ್ಲಿದ್ದನು. ಆದರೆ ಸುದ್ದಿ ತಿಳಿದ ಕೂಡಲೇ ವೀರ ಸೋಮೇಶ್ವರನು ತನ್ನ ಸಾಮ್ರಾಜ್ಯದ ಉತ್ತರ ಗಡಿಗೆ ಧಾವಿಸಿದನು. ವೀರಸೋಮೇಶ್ವರನು ಸೇವುಣ ಬಲವನ್ನು ಸೋಲಿಸಿ ಕೃಷ್ಣಾ ನದಿಯವರೆಗೂ ಹಿಮ್ಮೆಟ್ಟಿಸಿದನು. ಕಾಮೇಯ ನಾಯಕ ಎಂಬ ಹೊಯ್ಸಳ ದಂಡನಾಯಕನು ಸೇವುಣರೊಡನೆ ನಡೆದ ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿದನು. ವೀರಸೋಮೇಶ್ವರನು ಸೇವುಣರನ್ನು ಹಿಮ್ಮೆಟ್ಟಿಸಿದ ಕೂಡಲೇ ಪುನಃ ತಮಿಳು ನಾಡಿಗೆ ಪ್ರಯಾಣ ಮಾಡಿದನು. ತಮಿಳುನಾಡಿನ ರಾಜಕೀಯವು ಸುಸೂತ್ರವಾಗಿ ಮುಂದುವರಿದಿದ್ದ ಪಕ್ಷದಲ್ಲಿ ಸೇವುಣರು ಹೊಯ್ಸಳರಿಂದ ಹೆಚ್ಚಿನ ಆಘಾತವನ್ನು ಅನುಭವಿಸಬೇಕಾಗುತ್ತಿತ್ತು.

ತಮಿಳುನಾಡಿನಲ್ಲಿದ್ದ ಸೌಹಾರ್ದ ಪರಿಸ್ಥಿತಿಯು ಹೆಚ್ಚು ಕಾಲ ಮುಂದುವರಿಯಲಿಲ್ಲ. ಅಲ್ಲಿ ಕ್ರಿ.ಶ. 1251ರಲ್ಲಿ ಪುನಃ ರಾಜಕೀಯ ಏರುಪೇರುಗಳುಂಟಾದವು. ಪಾಂಡ್ಯ ರಾಜನಾದ ಮಾರವರ್ಮನ್ ಸುಂದರ ಪಾಂಡ್ಯನು ಮಡಿದು ಜಟಾವರ್ಮನ್ ಸುಂದರ ಪಾಂಡ್ಯನು ರಾಜನಾದನು. ಅವನು ಪಾಂಡ್ಯ ಸಂತತಿಯ ಅತಿಪರಾಕ್ರಮಿ ರಾಜರಲ್ಲೊಬ್ಬನು. ಪಟ್ಟಕ್ಕೆ ಬಂದ ಕೂಡಲೇ ದಿಗ್ವಿಜಯದಲ್ಲಿ ತೊಡಗಿ ಚೇರ, ಚೋಳ ಮೊದಲಾದ ರಾಜರನ್ನೆಲ್ಲಾ ಸೋಲಿಸಿ ಪಾಂಡ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅವನು ಹೊಯ್ಸಳ ಸೈನ್ಯವನ್ನು ಸೋಲಿಸಿದನು. ಆದರೆ ಸೋಮೇಶ್ವರನು ತಮಿಳು ರಾಜಕೀಯದಲ್ಲಿ ಮೊದಲಿನಷ್ಟು ಪ್ರಭಾವವನ್ನು ಹೊಂದಲಾಗದಿದ್ದರೂ ಶ್ರೀರಂಗಂ ಸುತ್ತು ಮುತ್ತಿನ ಪ್ರದೇಶದ ಮೇಲೆ ತನ್ನ ಆಳ್ವಿಕೆಯನ್ನು ಮುಂದುವರಿಸಿದನು. ಹೊಯ್ಸಳರು ತಮಿಳುನಾಡಿನಲ್ಲಿ ಹೊಂದಿದ್ದ ಪ್ರಭಾವವು ಕಡಿಮೆಯಾಯಿತು. ಆ ವೇಳೆಗೆ ಅನಾರೋಗ್ಯದಿಂದ ನರಳುತ್ತಿದ್ದ ಸೋಮೇಶ್ವರನು ಕ್ರಿ.ಶ. 1254ರಲ್ಲಿ ದೋರಸಮುದ್ರಕ್ಕೆ ಬಂದನು. ಅನಾರೋಗ್ಯದ ಪರಿಹಾರಾರ್ಥವಾಗಿ ಬೇಲೂರು ಮತ್ತು ದೋರ ಸಮುದ್ರದ ದೇವಾಲಯಗಳಿಗೆ ವಿಶೇಷ ದಾನಧರ್ಮಗಳನ್ನು ನೀಡಿದನು.

ವೀರ ಸೋಮೇಶ್ವರನು ತನ್ನ ಕೊನೆಗಾಲದಲ್ಲಿ ತಮಿಳುನಾಡಿನ ರಾಜಕೀಯದಲ್ಲುಂಟಾದ ಪರಾಜಯ ಮತ್ತು ಅನಾರೋಗ್ಯದ ಜೊತೆಗೆ ಕೌಟುಂಬಿಕ ತೊಂದರೆಯನ್ನು ಅನುಭವಿಸಬೇಕಾಯಿತು. ಅವನಿಗೆ ಬಿಜ್ಜಳ ಮಹಾದೇವಿ ಮತ್ತು ದೇವಲದೇವಿ ಎಂಬ ಇಬ್ಬರು ರಾಣಿಯರಿದ್ದರು. ಬಿಜ್ಜಳ ದೇವಿಗೆ ವೀರನರಸಿಂಹ ಎಂಬ ಪುತ್ರನೂ ದೇವಲದೇವಿಗೆ ವೀರರಾಮನಾಥ ಎಂಬ ಪುತ್ರನೂ ಇದ್ದರು. ಇಬ್ಬರೂ ಸಮವಯಸ್ಕರಾಗಿದ್ದು ಪರಸ್ಪರ ಸಂಶಯದಿಂದ ಕೂಡಿದ್ದರು. ಅವರಿಬ್ಬರು ಸುಮಾರು 15 ವರ್ಷ ವಯಸ್ಸಿನವರಾಗಿದ್ದರು. ಸಿಂಹಾಸನಕ್ಕಾಗಿ ಸ್ಪರ್ಧೆಯಲ್ಲಿ ತೊಡಗಿದ್ದರು. ಅವರ ಕಾದಾಟವನ್ನು ನಿವಾರಿಸಲು ವೀರಸೋಮೇಶ್ವರನು ಸಾಮ್ರಾಜ್ಯವನ್ನು ವಿಭಜಿಸಿ ಅವರಿಗೆ ಹಂಚಿ

ಕ್ರಿ.ಶ. 1255ರಲ್ಲಿ ಮರಣ ಹೊಂದಿದನು. ಅವನ ಮರಣಾನಂತರ ದೋರಸಮುದ್ರದಲ್ಲಿ ವೀರನರಸಿಂಹನೂ, ತಮಿಳುನಾಡಿನಲ್ಲಿ ವೀರರಾಮನಾಥನೂ ಅಧಿಕಾರ ರೂಢರಾದರು.

ವೀರ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲೂ ಹೊಯ್ಸಳ ಸಾಮ್ರಾಜ್ಯವು ಸುಭಿಕ್ಷೆಯಿಂದ ಕೂಡಿತ್ತು. ನುಗ್ಗೆಹಳ್ಳಿಯ ಲಕ್ಷ್ಮೀನರಸಿಂಹ ಮತ್ತು ಸದಾಶಿವ ಜಾವಗಲ್ಲಿನ ಲಕ್ಷ್ಮೀನರಸಿಂಹ, ಬೂದನೂರಿನ ಈಶ್ವರ, ತಂಡಗದ ಕೇಶವ, ಹೊಸಹೊಳಲಿನ ಲಕ್ಷ್ಮೀನಾರಾಯಣ, ಗೋವಿಂದನ ಹಳ್ಳಿಯ ಪಂಚಲಿಂಗೇಶ್ವರ ಮೊದಲಾದ ಸುಂದರ ದೇವಾಲಯಗಳು ವೀರ ಸೋಮೇಶ್ವರನ ಆಳ್ವಿಕೆಯಲ್ಲಿ ನಿರ್ಮಾಣವಾದವು. ಕೇರಳದಿಂದ ಬಂದು ಹೊಯ್ಸಳ ನಾಡಿನಲ್ಲಿ ನೆಲಸಿದ್ದ ವೊಡ್ಡ ವ್ಯವಹಾರಿಯೊಬ್ಬನ ಕುಮಾರಿ ಚಂದವ್ವೆ ಎಂಬುವಳಿಗೆ, ಅವಳು ನೃತ್ಯ ಮತ್ತು ಸಂಗೀತದಲ್ಲಿ ಹೊಂದಿದ್ದ ಪ್ರವೀಣತೆಗಾಗಿ 'ಗಾನಕುಮಾರಿ' ಎಂಬ ಬಿರುದನ್ನು ನೀಡಿ ಗೌರವಿಸಿದನು. ಸೋಮೇಶ್ವರನ ಆಸ್ಥಾನದಲ್ಲಿದ್ದ ಎರಡನೇ ವಿದ್ಯಾಚಕ್ರವರ್ತಿ ಎಂಬ ವಿದ್ವಾಂಸನು ಸಂಸ್ಕೃತ ಭಾಷೆಯಲ್ಲಿ 'ಗದ್ಯಕರ್ಣಾಮೃತ' ಎಂಬ ಗ್ರಂಥವನ್ನು ರಚಿಸಿದನು. ವೀರ ಸೋಮೇಶ್ವರನು ಹಿರಣ್ಯಗರ್ಭ ಮತ್ತು ತುಲಾಪುರುಷ ಯಜ್ಞಗಳನ್ನು ಮಾಡಿದನು. ಅವನು ಯೋಧನಾಗಿ ವೈರಿಗಳ ಮೇಲೆ ಜಯ ಗಳಿಸಿದನು. ಚತುರತೆಯಿಂದ ಆಡಳಿತ ನಡೆಸಿದನು. ಸೋಮೇಶ್ವರನ ವಿಭಜನೆಯಿಂದ ತನ್ನ ಮನೆತನದ ಪ್ರತಿಷ್ಠೆಯು ಏಳ್ಗೆ ಹೊಂದುವುದೆಂದು ಭಾವಿಸಿದ್ದನು. ಆದರೆ ಅದು ಅವನ ಎಣಿಕೆಗೆ ವಿರುದ್ಧವಾಗಿ ಮಾರ್ಪಾಡಾಯಿತು! ಆದ್ದರಿಂದ ಸೋಮೇಶ್ವರನ ಆಳ್ವಿಕೆಯನ್ನು ಹೊಯ್ಸಳ ಸಂತತಿಯ ಅತ್ಯಂತ ಪ್ರತಿಷ್ಟೆಯ ಕಾಲವೆಂದು ಪರಿಗಣಿಸಲಾಗದು ಅಂತೆಯೇ ಅವನ ಆಳ್ವಿಕೆಯು ಚಿಂತಾಜನಕ ವಾದುದೂ ಆಗಲಾರದು. ವೀರಸೋಮೇಶ್ವರನು ತನಗೆದುರಾದ ಶತ್ರುಗಳೊಡನೆ ವೀರಾವೇಶದಿಂದ ಹೋರಾಡಿದನು. ಸೇವುಣರನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ತಮಿಳುನಾಡಿನಲ್ಲಿ ಉತ್ತಮವಾದ ರಾಜಕೀಯ ಸ್ಥಿತಿಯನ್ನು ಏರ್ಪಡಿಸಿದನು. ಆದರೆ ಜಟಾವರ್ಮನ್ ಸುಂದರ ಪಾಂಡ್ಯನನ್ನು ಅವನು ಜಯಿಸಲಾಗಲಿಲ್ಲ. ಭ್ರಾತೃ ಕಲಹದಿಂದ ಸಾಮ್ರಾಜ್ಯವನ್ನು ಸಂರಕ್ಷಿಸಲು ಅವನು ರಾಜ್ಯ ವಿಭಜನೆ ಮಾಡಲೇ ಬೇಕಾಯಿತು.

## ಮೂರನೇ ವೀರನರಸಿಂಹ (1256-1291)

ಸೋಮೇಶ್ವರನು ಸಾಮ್ರಾಜ್ಯವನ್ನು ವಿಭಜಿಸಿ ತನ್ನ ಇಬ್ಬರೂ ಮಕ್ಕಳಿಗೂ ಕೊಟ್ಟನು. ಪಿತ್ರಾರ್ಜಿತವಾಗಿ ಬಂದಿದ್ದ ಭಾಗಗಳನ್ನು ನರಸಿಂಹನಿಗೂ ತಮಿಳುನಾಡಿನ ಪ್ರದೇಶವನ್ನು ರಾಮನಾಥನಿಗೂ ಕೊಟ್ಟನು. ಕನ್ನಡನಾಡಿನ ಪೂರ್ವಗಡಿಯ ಕೋಲಾರ ಮತ್ತು ಬೆಂಗಳೂರು ಜಿಲ್ಲೆಯ ಪ್ರದೇಶಗಳು ಮತ್ತು ತಮಿಳುನಾಡಿನ ಭಾಗಗಳು ರಾಮನಾಥನ ಆಳ್ವಿಕೆಗೆ ಸೇರಿದವು. ವೀರನರಸಿಂಹನು ದೋರಸಮುದ್ರದಲ್ಲೂ ವೀರರಾಮನಾಥನು ಕಣ್ಣಾನೂರಿನಲ್ಲೂ ಏಕ ಕಾಲದಲ್ಲಿ 1256ರಲ್ಲಿ ಅಧಿಕಾರ ವಹಿಸಿಕೊಂಡರು.

ವೀರನರಸಿಂಹನಿಗೂ ಮತ್ತು ವೀರರಾಮನಾಥನಿಗೂ ಸತತವಾಗಿ ದಾಯಾದಿ ಕಲಹಗಳು ನಡೆದವು. ರಾಜ್ಯದ ಹಂಚಿಕೆಯಿಂದ ಅತೃಪ್ತನಾದ ರಾಮನಾಥನು ಬೆಂಗಳೂರು ತುಮಕೂರಿನತ್ತ ರಾಜ್ಯ ವಿಸ್ತರಿಸಲು ಹವಣಿಸಿದನು. ಭ್ರಾತೃಕಲಹದಿಂದ ಬಲಹೀನಗೊಂಡಿದ್ದ ವೀರನರಸಿಂಹನ ರಾಜ್ಯವನ್ನು ಆಕ್ರಮಿಸಲು ಸೇವುಣರು ಮುಂದಾದರು. ನರಸಿಂಹನು ರಾಮನಾಥನನ್ನು ಸೋಲಿಸಿ ಹಿಮ್ಮೆಟ್ಟಿಸುವ ವೇಳೆಗೆ 1271ರಲ್ಲಿ ಸೇವುಣ ಮಹದೇವನು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳ ಮೇಲೆ ಆಕ್ರಮಣ ನಡೆಸಿದನು. ಆದರೆ ನರಸಿಂಹನೂ ಅವನ ದಂಡನಾಯಕನಾದ ಪೆರಮಾಳನೂ ಸೇವುಣರನ್ನು ಎದುರಿಸಿ ಸೋಲಿಸಿದರು. ಯುದ್ಧದಲ್ಲಿ ಸೇವುಣ ದಂಡನಾಯಕನಾದ ರತ್ನಪಾಲ ಎಂಬುವನು ಮರಣ ಹೊಂದಿದನು. ಸೇವುಣ ಒಲವು ಹಿಮ್ಮೆಟ್ಟಿತು.

ಸೇವುಣ ಮಹದೇವನ ತರುವಾಯ ಅಧಿಕಾರಕ್ಕೆ ಬಂದ ರಾಮಚಂದ್ರನು ಕ್ರಿ.ಶ. 1276ರಲ್ಲಿ ಪ್ರಬಲ ಸೈನ್ಯದೊಂದಿಗೆ ಮುಂದುವರಿದು ದೋರಸಮುದ್ರವನ್ನು ಮುತ್ತುವ ಹಂಚಿಕೆಯಲ್ಲಿದ್ದನು. ಸೇವುಣ ಬಲವು ಬೆಳವಾಡಿಯವರೆಗೂ ಬಂದಿತು. ಆ ವೇಳೆಯಲ್ಲಿ ರಾಮನಾಥನೊಡನೆ ಯುದ್ಧದಲ್ಲಿ ತೊಡಗಿದ್ದ ನರಸಿಂಹನು ಸೇವುಣರನ್ನು ಎದುರಿಸಲು ಧಾವಿಸಿದನು. ಸೈನ್ಯದ ನಾಯಕತ್ವವನ್ನು ವಹಿಸಿ ವೀರಾವೇಶದಿಂದ ಹೋರಾಡಿ ಜಯ ಗಳಿಸಿದನು. ನರಸಿಂಹನ ದಳಪತಿಗಳಾದ ಚಿಕ್ಕಕೇತಯ್ಯ ಮತ್ತು ಅಂಕಯ್ಯ ಮೊದಲಾದವರು ಜೀವದ ಹಂಗನ್ನು ತೊರೆದು ಶತ್ರುಗಳ ಮೇಲೆ ಬಿದ್ದು ಹೋರಾಡಿದರು. ಶತ್ರು ಸೈನ್ಯವು ಸೋತು ಓಡಿತು. ಹೊಯ್ಸಳ ಸೈನ್ಯವು ಅವರನ್ನು ಚಿತ್ರದುರ್ಗದವರೆಗೂ ಬೆನ್ನಟ್ಟಿತು. ಆನಂತರ ನರಸಿಂಹನು ಸೇವುಣರೊಡನೆ ಸಹಕರಿಸಿದ ನಿಡಗಲ್ ಚೋಳ ಮೊದಲಾದ ಸಾಮಂತರನ್ನು ಶಿಕ್ಷಿಸಿದನು. ಸೇವುಣರ ಆಕ್ರಮಣದಿಂದ ಹೊಯ್ಸಳ ರಾಜ್ಯವನ್ನು ಪಾರು ಮಾಡಿದನು.

ದಾಯಾದಿ ಕಲಹ ಮತ್ತು ಸೇವುಣರ ಆಕ್ರಮಣದಿಂದ ಹೊಯ್ಸಳರ ಪ್ರಾಬಲ್ಯವು ಬಲಹೀನವಾದಾಗ್ಯೂ ರಾಜ್ಯದಲ್ಲಿ ಅನೇಕ ಸುಂದರ ಮಂದಿರಗಳು ನಿರ್ಮಾಣಗೊಂಡವು. ಅವನ ಆಳ್ವಿಕೆಯ ಕೊನೆಗಾಲದಲ್ಲಿ ಯುವರಾಜ ಮೂರನೇ ಬಲ್ಲಾಳನು ತಂದೆಗೆ ಹೆಚ್ಚು ಸಹಕಾರಿ ಯಾಗಿದ್ದನು. ಪೆರುಮಾಳ ದಂಡನಾಯಕ ಮತ್ತು ಸೋಮ ದಂಡನಾಯಕರು ನರಸಿಂಹನ ಪ್ರಸಿದ್ಧ ಸಚಿವರಾಗಿದ್ದರು. ಅವರು ಹಲವಾರು ಯುದ್ಧಗಳಲ್ಲಿ ಪಾಲ್ಗೊಂಡು ಜಯಗಳಿಸಿದುದಲ್ಲದೆ, ಅನೇಕ ದೇವಾಲಯಗಳನ್ನು ಕೆರೆ ಕಾಲುವೆಗಳನ್ನು ನಿರ್ಮಿಸಿದರು. ಪೆರಮಾಳ ದಂಡನಾಯಕನು ಚಿತ್ರದುರ್ಗ, ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಮೊದಲಾದ ಸ್ಥಳಗಳಲ್ಲಿ ದೇವಾಲಯಗಳನ್ನೂ, ಕೆರೆಗಳನ್ನೂ ಕಟ್ಟಿಸಿದನು. ಸೋಮ ದಂಡನಾಯಕನು ಸೋಮನಾಥಪುರದ ಸುಪ್ರಸಿದ್ಧ ಕೇಶವ ದೇವಾಲಯವನ್ನು ಕಟ್ಟಿಸಿದನು. ತುರುವೆಕೆರೆಯ ಕೇಶವ, ಸೆಟ್ಟಿಕೆರೆಯ ಯೋಗ ಮಾಧವ, ಹೊಳೆನರಸೀಪುರದ ಲಕ್ಷ್ಮೀ ನರಸಿಂಹ ಮೊದಲಾದ ಇತರ ದೇವಾಲಯಗಳೂ ನರಸಿಂಹನ ಕಾಲದಲ್ಲಿ ನಿರ್ಮಾಣವಾದುವು. ಆ ವೇಳೆಗೆ

ಕನ್ನಡನಾಡಿನಿಂದ ಹೋಗಿ ಕಾಶಿಯಲ್ಲಿ ನೆಲಸಿದ್ದ ಬ್ರಾಹ್ಮಣ ಕುಟುಂಬಗಳ ಮೇಲ್ಮೆಗಾಗಿ ವೀರನರಸಿಂಹನು ಹಾಸನ ಜಿಲ್ಲೆಯ ಅನೇಕ ಗ್ರಾಮಗಳ ಹುಟ್ಟುವಳಿಯನ್ನು ದಾನವನ್ನು ನೀಡಿದನು. ಮಿಗಿಲಾಗಿ ಕನ್ನಡನಾಡಿನ ಯಾತ್ರಾರ್ಥಿಗಳ ಸಲುವಾಗಿ ವಿಷ್ಣುಗಯೆಯಲ್ಲಿ ಒಂದು ಧರ್ಮಶಾಲೆಯನ್ನು ಸ್ಥಾಪಿಸಿದನು.

**ವೀರ ರಾಮನಾಥ (1256-1294)**

ವೀರ ರಾಮನಾಥನು ಪ್ರಾರಂಭದಲ್ಲಿ ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಸ್ಥಾಪಿಸಿದನು. ಅವನು ಬಹುಬೇಗ ಜಟಾವರ್ಮನ್ ಸುಂದರ ಪಾಂಡ್ಯನಿಂದ ಪರಾಜಿತನಾಗಿ ತನ್ನ ರಾಜ್ಯದ ಹೆಚ್ಚು ಭಾಗವನ್ನೂ ಕೊನೆಗೆ ರಾಜಧಾನಿಯನ್ನು ಕಳೆದುಕೊಂಡನು. ಅನಂತರ ಹೊಸೂರು ಬಳಿಯ ಕುಂದಾಣಿ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತನ್ನ ಸಹೋದರನಾದ ವೀರನರಸಿಂಹನ ರಾಜ್ಯದ ಮೇಲೆ ನಿರಂತರವಾದ ಆಕ್ರಮಣದಲ್ಲಿ ತೊಡಗಿದನು. ಅವನು ಕುಣಿಗಲ್‌ವರೆಗೂ ದಾಳಿಯನ್ನು ಮುಂದುವರಿಸಿದನು. ಆದರೆ ವೀರ ನರಸಿಂಹನಿಂದ ಪರಾಜಿತನಾಗಿ ಹಿಂದಿರುಗಬೇಕಾಯಿತು. ಆದರೂ ಆಕ್ರಮಣಗಳನ್ನು ಮುಂದುವರಿಸಿದನು. ಕ್ರಮೇಣ ವೀರನರಸಿಂಹನೂ ಅವನ ಮಗನಾದ ಮೂರನೇ ಬಲ್ಲಾಳನೂ ರಾಮನಾಥನ ಆಕ್ರಮಣವನ್ನು ಯಶಸ್ವಿಯಾಗಿ ಎದುರಿಸಿದರು. ತನ್ನ ರಾಜ್ಯದ ಬಹುಭಾಗವನ್ನು ಮತ್ತು ತನ್ನ ಪೂರ್ವಜರಿಂದ ಬಂದಿದ್ದ ಸಂಪತ್ತನ್ನು ಕಳೆದುಕೊಂಡಿದ್ದ ರಾಮನಾಥನು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳ ಲಾಗಲಿಲ್ಲ. ಅವನು 1294ರವರೆಗೂ ತನ್ನ ರಾಜಧಾನಿಯ ಸುತ್ತಮುತ್ತಿನ ಪ್ರದೇಶಗಳ ಮೇಲೆ ಆಳ್ವಿಕೆ ಮುಂದುವರಿಸಿದನು.

**ವೀರ ವಿಶ್ವನಾಥ (1294-1297)**

ವೀರರಾಮನಾಥನ ಮರಣಾನಂತರ ಅವನ ಮಗನಾದ ವೀರವಿಶ್ವನಾಥನು ಕುಂದಾಣಿಯಿಂದ ಸ್ವಲ್ಪ ಕಾಲ ರಾಜ್ಯಭಾರ ಮಾಡಿದನು. ಆದರೆ ಆ ವೇಳೆಗೆ ದೋರಸಮುದ್ರದಲ್ಲಿ ಸಿಂಹಾಸನಕ್ಕೆ ಬಂದಿದ್ದ ಮೂರನೇ ಬಲ್ಲಾಳನು ರಾಜ್ಯ ವಿಸ್ತರಣೆಯಲ್ಲಿ ತೊಡಗಿ ಕುಂದಾಣಿಯನ್ನು ಆಕ್ರಮಿಸಿದನು. 1298ರ ವೇಳೆಗೆ ಬಲ್ಲಾಳನು ಪುನಃ ಅಖಂಡ ಹೊಯ್ಸಳ ರಾಜ್ಯದ ಅಧಿಪತಿಯಾದನು. ವಿಶ್ವನಾಥನ ಅಂತ್ಯವು ಎಲ್ಲಿ ಮತ್ತು ಯಾರಿಂದ ಸಂಭವಿಸಿತೆಂದು ತಿಳಿದು ಬರುವುದಿಲ್ಲ.

**ಮೂರನೇ ವೀರಬಲ್ಲಾಳ (1292-1343)**

ಮೂರನೇ ನರಸಿಂಹನ ಮಗನಾದ ಮೂರನೇ ವೀರಬಲ್ಲಾಳನು ಹೊಯ್ಸಳ ಸಂತತಿಯ ಅತಿ ಸಮರ್ಥ ರಾಜರಲ್ಲಿ ಒಬ್ಬನೂ ಹಾಗೂ ಆ ಸಂತತಿಯ ಕೊನೆಯ ಚಕ್ರವರ್ತಿಯೂ ಆಗಿದ್ದಾನೆ. ಅವನು ಪರಾಕ್ರಮಿಯೂ, ರಾಜತಂತ್ರ ನಿಪುಣನೂ ಆಗಿದ್ದನು. ಆದರೆ ಅವನ

ಆಳ್ವಿಕೆಯ ಕಾಲವು ದಕ್ಷಿಣ ಭಾರತದ ಇತಿಹಾಸದಲ್ಲಿ ಜಟಿಲವೂ, ಸಂಧಿಗ್ಧವೂ ಆದ ಕಾಲವಾಗಿತ್ತು. ಇತಿಹಾಸ ಪ್ರಸಿದ್ಧವಾದ ಚೋಳ ಮನೆತನವು ಆ ವೇಳೆಗೆ ವಿನಾಶವಾಗಿತ್ತು. ಮಧುರೆಯ ಪಾಂಡ್ಯರ ಮನೆತನವು ವಿನಾಶದ ಅಂಚಿನಲ್ಲಿತ್ತು. ಆಂಧ್ರದ ಕಾಕತೀಯ ಮನೆತನವೂ ದುರ್ಬಲವಾಗಿತ್ತು. ದೇವಗಿರಿಯ ಸೇವುಣ ಸಂತತಿಯೂ ಸಹ ರಾಜಕೀಯ ಚಂಡ ಮಾರುತಕ್ಕೆ ಒಳಗಾಗಿತ್ತು. ದೆಹಲಿ ಸುಲ್ತಾನರು ದಕ್ಷಿಣ ಭಾರತದ ಮೇಲೆ ಸತತವಾಗಿ ಆಕ್ರಮಣ ನಡೆಸತೊಡಗಿದರು. ಅಂತಹ ದುರ್ಬರ ಸಮಯದಲ್ಲಿ ದಕ್ಷಿಣದ ರಾಜ್ಯಗಳೆಲ್ಲವೂ ಒಂದೊಂದಾಗಿ ನಿರ್ನಾಮವಾಗಿದ್ದವು. ವೀರಬಲ್ಲಾಳನು ಪರಾಕ್ರಮದಿಂದ ಹಾಗೂ ಜಾಣ್ಮೆಯಿಂದ ಆಗ ಸಂಭವಿಸಿದ ವಿಪ್ಲವದಿಂದ ತನ್ನ ಮನೆತನದ ಕೀರ್ತಿಯನ್ನು ಹೆಚ್ಚಿಸಿ ದಕ್ಷಿಣ ಭಾರತವನ್ನು ಉತ್ತರದ ದಂಡಯಾತ್ರೆಗಳಿಂದ ಪಾರು ಮಾಡಲು ಹೋರಾಡಿದನು. ಆದರೆ ಆಕಸ್ಮಿಕ ಹೊಡೆತದಿಂದ ತಾನೂ ಕಣ್ಮರೆಯಾದನು. ಹೊಯ್ಸಳ ಸಾಮ್ರಾಜ್ಯವೂ ಇತಿಹಾಸದಿಂದ ನಿರ್ಗಮಿಸಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಸಹಕಾರಿಯಾಯಿತು.

ಮೂರನೇ ವೀರಬಲ್ಲಾಳನು ಪಟ್ಟಕ್ಕೆ ಬರುವ ವೇಳೆಗೆ 28 ವರ್ಷಗಳ ವೀರ ಯುವಕನಾಗಿದ್ದನು. ಯುವರಾಜನಾಗಿದ್ದಾಗಲೇ ತಂದೆಗೆ ಸಹಾಯಕನಾಗಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ರಾಜ್ಯಕ್ಕೊದಗಿದ ದುರ್ಗತಿಯನ್ನು ಅರಿತಿದ್ದನು. ಪಟ್ಟಕ್ಕೆ ಬಂದ ಕೂಡಲೇ ರಾಜ್ಯವನ್ನು ಸುವ್ಯವಸ್ಥೆಗೊಳಿಸಿ ತನ್ನ ಮನೆತನದ ಗತಿಸಿದ ಪ್ರಾಬಲ್ಯವನ್ನು ಪುನರುಜ್ಜೀವನಗೊಳಿಸಲು ಕಂಕಣಬದ್ಧನಾದನು. ದಾಯಾದಿ ಕಲಹದಿಂದ ರಾಜ್ಯವನ್ನು ಪಾರು ಮಾಡುವುದು ಅವನ ಮೊದಲ ಕರ್ತವ್ಯವಾಗಿತ್ತು. ಚಿಕ್ಕಪ್ಪನಾದ ರಾಮನಾಥನು ಸೀರೆನಾಡು ಮತ್ತು ಚಿತ್ರದುರ್ಗ ಜಿಲ್ಲೆಯವರೆಗೂ ಆಕ್ರಮಣಗಳನ್ನು ಮುಂದುವರಿಸಿದನು. ಬಲ್ಲಾಳನು ಕ್ರಿ.ಶ. 1394ರಲ್ಲಿ ಅವನ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಆ ವೇಳೆಗೆ ರಾಮನಾಥನು ಗತಿಸಿ ಅವನ ಮಗನಾದ ವಿಶ್ವನಾಥನು ಅಧಿಕಾರ ವಹಿಸಿದನು. ಬಲ್ಲಾಳನಿಗೂ ವಿಶ್ವನಾಥನಿಗೂ ನಡೆದ ಯುದ್ಧಗಳ ಮಾಹಿತಿಯು ಲಭ್ಯವಿಲ್ಲ. ಆದರೆ ಕ್ರಿ.ಶ. 1300ರ ವೇಳೆಗೆ ವಿಶ್ವನಾಥನ ಅಧಿಕಾರವು ಕೊನೆಗೊಂಡು ವೀರಬಲ್ಲಾಳನು ಹೋಳಾಗಿದ್ದ ರಾಜ್ಯವನ್ನು ಪುನಃ ಒಂದುಗೂಡಿಸಿದನು. ಅನಂತರ ರಾಜ್ಯದ ಪಶ್ಚಿಮ ಹಾಗೂ ಉತ್ತರದ ಗಡಿಗಳಲ್ಲಿ ತಲೆದೋರಿದ್ದ ಅಭದ್ರತೆಯನ್ನು ಸರಿಪಡಿಸಲು ತೊಡಗಿದನು.

ದೇವಗಿರಿಯ ಸೇವುಣರು ಹೊಯ್ಸಳ ರಾಜ್ಯದ ಉತ್ತರ ಗಡಿಗಳನ್ನು ಆಕ್ರಮಿಸಿ ಉಪದ್ರವವನ್ನು ಮುಂದುವರಿಸುತ್ತಿದ್ದರು. ಬಲ್ಲಾಳನು ಸೇವುಣರ ಆಕ್ರಮಣವನ್ನು ಕೊನೆಗಾಣಿಸಲು ಕ್ರಿ.ಶ.1301 ರಲ್ಲಿ ತನ್ನ ಸೈನ್ಯವನ್ನು ಕಳುಹಿಸಿದನು. ಸೇವುಣರನ್ನು ಎದುರಿಸಿ ಹೋರಾಡುತ್ತಿದ್ದ ಹೊಯ್ಸಳ ಮಾಂಡಲಿಕರಾದ ಹೊಸಗುಂದದ ಶಾಂತಾರರ ಸಹಾಯಕ್ಕಾಗಿ ಹೊಯ್ಸಳ ಸೈನ್ಯವು ಧಾವಿಸಿತು. ಆ ಸೈನ್ಯವು ವಿರೋಧಿಗಳನ್ನು ಹಾನಂಗಲ್ಲಿನ ಕದಂಬ ಮೊದಲಾದ ಸೇವುಣ ಮಾಂಡಲಿಕರನ್ನೂ ಸೋಲಿಸಿ ಸಿರಸಿಯವರೆಗೂ ಹೊಯ್ಸಳ ರಾಜ್ಯದ

ಗಡಿಗಳನ್ನು ವಿಸ್ತರಿಸಲಾಯಿತು. ಕ್ರಿ.ಶ. 1303ರಲ್ಲಿ ಸೇವುಣ ದಂಡನಾಯಕ ಮುಮ್ಮಡಿ ಸೀಮಗೇಯ ನಾಯಕನ ಮಗ ಕಂಪಿಲನು ತುಂಗಭದ್ರಾ ತೀರದಲ್ಲಿ ಹೊಯ್ಸಳ ಸೈನ್ಯವನ್ನು ಎದುರಿಸಿದನು. ಬಲ್ಲಾಳನ ಭಾವಮೈದುನನೂ ದಂಡನಾಯಕನೂ ಆದ ಸೋಮೇಯ ದಂಡನಾಯಕನು ಕಂಪಿಲನನ್ನು ಎದುರಿಸಿ ವೀರಾವೇಶದಿಂದ ಯುದ್ಧಮಾಡಿ ಸೇವುಣ ಪಡೆಗಳನ್ನು ಸೋಲಿಸಿ ತಾನೂ ರಣರಂಗದಲ್ಲಿ ಅಸುನೀಗಿದನು. ಕೂಡಲೇ ಬಲ್ಲಾಳನು ಸೈನ್ಯದ ನಾಯಕತ್ವವನ್ನು ವಹಿಸಿ ಸೇವುಣ ಬಲವನ್ನು ಹಿಮ್ಮೆಟ್ಟಿಸಿದನು. ಕ್ರಿ.ಶ. 1305ರ ವೇಳೆಗೆ ಪುನಃ ಸೇವುಣ ರಾಜ ರಾಮಚಂದ್ರ ದೇವನು ಹೊಯ್ಸಳ ರಾಜ್ಯದ ಮೇಲೆ ಆಕ್ರಮಣಕ್ಕಾಗಿ ಸೈನ್ಯ ಕಳುಹಿಸಿದನು. ಬಲ್ಲಾಳನನ್ನು ಸೆರೆಹಿಡಿದು ತರಬೇಕೆಂದು ತನ್ನ ದಳಪತಿಗಳಿಗೆ ಆದೇಶ ನೀಡಿದ್ದನು. ಬಲ್ಲಾಳನು ಆ ವೇಳೆಗೆ ತುಂಗಭದ್ರಾ ತೀರದ ಕಂಪಿಲೆಯಲ್ಲಿ ಅಧಿಕಾರ ಸ್ಥಾಪಿಸಿದ್ದ ಕಂಪಿಲ ರಾಯನನ್ನೂ ಸೇವುಣ ಸೈನ್ಯವನ್ನೂ ಸೋಲಿಸಿ ಓಡಿಸಿದುದಲ್ಲದೆ ಬೆಳುವೊಲ ಪ್ರದೇಶವನ್ನು ಆಕ್ರಮಿಸಿ ಲೊಕ್ಕಿಗುಂಡಿವರೆಗೂ ರಾಜ್ಯವನ್ನು ವಿಸ್ತರಿಸಿದನು. ಸೇವುಣರಾಮಚಂದ್ರನು ಕರ್ನಾಟಕದ "ಹುಲಿಮರಿಯನ್ನು" (ಬಲ್ಲಾಳನನ್ನು) ಸೋಲಿಸಲು ಮಾಡಿದ ಪ್ರಯತ್ನವೆಲ್ಲ ನಿರರ್ಥಕವಾಯಿತು. ಅನಂತರ ಬಲ್ಲಾಳನು ರಾಜ್ಯ ವಿಸ್ತರಣಾ ಕಾರ್ಯದಲ್ಲಿ ತೊಡಗಿ ತನ್ನ ತಾತ ಮುತ್ತಾತಂದಿರ ಕಾಲದ ಹೊಯ್ಸಳ ವೈಭವವನ್ನು ಸ್ಥಾಪಿಸುವ ಪ್ರಯತ್ನಶೀಲನಾಗಿ ತಮಿಳುನಾಡಿನತ್ತ ಗಮನ ಹರಿಸಿದನು.

ವೀರಬಲ್ಲಾಳನು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವನ್ನು ಸ್ಥಾಪಿಸುವ ಪ್ರಯತ್ನ ದಲ್ಲಿರುವಾಗ ದಕ್ಷಿಣ ಭಾರತಕ್ಕೆ ಹೊಸ ಉಪದ್ರವವು ತಲೆದೋರಿತು. ಕ್ರಿ.ಶ. 1311 ರಲ್ಲಿ ಅಲ್ಲಾವುದ್ದೀನನ ದಳಪತಿಯಾದ ಮಲ್ಲಿಕಾಫರನು ದಕ್ಷಿಣದ ರಾಜ ಮನೆತನಗಳನ್ನು ಸೋಲಿಸಿ ಅಪರಿಮಿತ ಐಶ್ವರ್ಯವನ್ನು ದೋಚುವ ಉದ್ದಿಶ್ಯಕ್ಕಾಗಿ ನೇಮಕಗೊಂಡು ದೇವಗಿರಿಯ ಸೇವುಣರನ್ನು ಸೋಲಿಸಿ ದೋರಸಮುದ್ರ ಮತ್ತು ಮದುರದತ್ತ ಮುಂದುವರಿದನು. ಕಾಫರನು ಹೊಯ್ಸಳ ಗಡಿಗಳನ್ನು ಪ್ರವೇಶಿಸುವ ವೇಳೆಯಲ್ಲಿ ವೀರಬಲ್ಲಾಳನು ಸೈನ್ಯ ಸಮೇತನಾಗಿ ತಮಿಳುನಾಡಿ ನಲ್ಲಿದ್ದನು. ಪಾಂಡ್ಯರಾಜ ಕುಮಾರರು ಸಿಂಹಾಸನಕ್ಕಾಗಿ ಕಲಹದಲ್ಲಿ ತೊಡಗಿ ಅವರಲ್ಲೊಬ್ಬನು ಬಲ್ಲಾಳನ ಸಹಾಯವನ್ನು ಯಾಚಿಸಿದನು. ಇಂತಹ ಸಂದರ್ಭಕ್ಕಾಗಿ ಕಾಯುತ್ತಿದ್ದ ಬಲ್ಲಾಳನು ಮದುರೆಯತ್ತ ಧಾವಿಸಿದ್ದನು. ಮಲ್ಲಿಕಾಫರನ ದಂಡೆಯಾತ್ರೆಯ ಸುದ್ದಿ ತಿಳಿದೊಡನೆ ಅವನು ದೋರ ಸಮುದ್ರಕ್ಕೆ ಪ್ರಯಾಣ ಕೈಗೊಂಡ ಶತ್ರುವನ್ನು ತಡೆಯುವ ವಿಧಾನವನ್ನು ಯೋಚಿಸಿದನು. ಆ ವೇಳೆಗೆ ಹೊಯ್ಸಳ ಸೈನ್ಯವು ಗಡಿಪ್ರದೇಶದಲ್ಲಿ ಕಾಫರನಿಂದ ಪರಾಜಯಗೊಂಡಿತ್ತು. ಮಹಮ್ಮದೀಯ ಸೈನ್ಯವು ರಾಜಧಾನಿಯನ್ನು ಸಮೀಪಿಸಿತು. ಸುತ್ತಮುತ್ತಿನ ಪ್ರದೇಶಗಳು ಶತ್ರು ಸೈನ್ಯದ ದಾಳಿಗೆ ಸಿಕ್ಕಿ ಪಾಳುಬಿದ್ದವು. ಬಲ್ಲಾಳನು ಅನಿರೀಕ್ಷಿತವಾಗಿ ಒದಗಿದ ಈ ದುರ್ಬರ ಸ್ಥಿತಿಯಿಂದ ರಾಜ್ಯವನ್ನು ರಕ್ಷಿಸಲು ಕಾಫರನೊಡನೆ ಒಪ್ಪಂದಕ್ಕೆ ಒಡಂಬಡಬೇಕಾಯಿತು. ಅವನಿಗೆ ವಿಶೇಷ ಐಶ್ವರ್ಯವನ್ನು ನೀಡುವುದರ ಮೂಲಕ ಯುದ್ಧವನ್ನು ಮತ್ತು ಭೀಕರ ಪರಿಣಾಮವನ್ನು ಪರಿಹರಿಸಿದನು.

ಅನಂತರ ಮಹಮ್ಮದೀಯ ಸೈನ್ಯವು ಮಧುರ ಮತ್ತು ರಾಮೇಶ್ವರದವರೆಗೂ ದಾಳಿಮಾಡಿ ಶ್ರೀಮಂತಿಕೆಯ ಬೀಡಾಗಿದ್ದ ದೇವಾಲಯಗಳನ್ನು ಸೂರೆಮಾಡಿ ವಿಶೇಷ ಐಶ್ವರ್ಯದೊಡನೆ ಹಿಂದಿರುಗಿತು. ಹಿಂದಿರುಗಿ ಹೋಗುವಾಗ ಕಾಫರನ ಅಪೇಕ್ಷೆಯಂತೆ ವೀರಬಲ್ಲಾಳನು ತನ್ನ ಕುಮಾರನಾದ ನಾಲ್ಕನೇ ಬಲ್ಲಾಳನನ್ನು ಕಾಫರನೊಡನೆ ದೆಹಲಿಗೆ ಕಳುಹಿಸಿದನು. ಅಲ್ಲಾವುದ್ದೀನ್ ಖಿಲ್ಜಿಯು ಕುಮಾರ ಬಲ್ಲಾಳನನ್ನು ಗೌರವದಿಂದ ಬರಮಾಡಿಕೊಂಡು ಅವನಿಗೆ ಉಚಿತ ಉಡುಗೊರೆಯನ್ನು ನೀಡಿ ಹಿಂದಕ್ಕೆ ಕಳುಹಿಸಿದನು. ಕುಮಾರ ಬಲ್ಲಾಳನು ಕ್ರಿ.ಶ. 1313 ರಲ್ಲಿ ಹಿಂದಿರುಗಿ ಬಂದಾಗ ದೋರ ಸಮುದ್ರದಲ್ಲಿ ವಿಶೇಷ ಸಂಭ್ರಮಗಳು ಜರುಗಿದವು. ಮಹಮ್ಮದೀಯ ದಾಳಿಯಿಂದ ದೇವಗಿರಿಯ ಸೇವುಣ ಹಾಗೂ ಮದುರದ ಪಾಂಡ್ಯ ರಾಜಮನೆತನಗಳು ಅಂತ್ಯಗೊಂಡವು.

ಮಲ್ಲಿಕಾಫರನ ದಾಳಿಯಿಂದ ತತ್ತರಿಸಿ, ದೆಹಲಿಗೆ ತೆರಳಿದ್ದ ತನ್ನ ಕುಮಾರನ ಆಗಮನದಿಂದ ಆನಂದ ಪುಳಕಿತನಾದ ವೀರಬಲ್ಲಾಳನು ರಾಜ್ಯರಕ್ಷಣೆ ಮತ್ತು ಬಲ ಸಂವರ್ಧನೆಯ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿದನು. ದಾಳಿಗೆ ಸಿಕ್ಕಿದ ಪ್ರದೇಶಗಳಿಗೆ ಭೇಟಿನೀಡಿ ಜನರಲ್ಲಿ ನೆಮ್ಮದಿಯನ್ನು ಮೂಡಿಸಿದನು. ದಾಳಿಯಿಂದುಟಾಗಿದ್ದ ನಷ್ಟವನ್ನು ಸರಿಪಡಿಸಿದ ನಂತರ ದೊಡ್ಡ ಸೈನ್ಯವನ್ನು ಕಟ್ಟಿ ತಮಿಳುನಾಡಿನಲ್ಲಿ ಕೈಬಿಟ್ಟು ಹೋಗಿದ್ದ ಪ್ರದೇಶಗಳ ಮೇಲೆ ಹೊಯ್ಸಳರ ಅಧಿಕಾರವನ್ನು ಪುನಃ ಸ್ಥಾಪಿಸಿದನು. ತುಂಗಭದ್ರಾ ತೀರದ ಸಣ್ಣಪುಟ್ಟ ಪಾಳೆಗಾರರನ್ನು ಸೋಲಿಸಿ ಅವರು ಹೊಯ್ಸಳರ ಪರಮಾಧಿಕಾರವನ್ನು ಒಪ್ಪುವಂತೆ ಮಾಡಿದನು. ಮುಮ್ಮಡಿ ವೀರಬಲ್ಲಾಳನು ಹೊಯ್ಸಳರ ಪ್ರಭುತ್ವವನ್ನು ದಕ್ಷಿಣ ಭಾರತದಲ್ಲಿ ಅಜೇಯ ಸಾಮ್ರಾಜ್ಯವನ್ನಾಗಿ ಮಾಡಲು ಪ್ರಯತ್ನಶೀಲನಾಗಿದ್ದಾಗ ಪುನಃ ಉತ್ತರದಿಂದ ಉಪದ್ರವ ತಲೆದೋರಿತು. ಆ ವೇಳೆಗೆ ಖಿಲ್ಜಿ ಮನೆತನದ ಆಳ್ವಿಕೆ ಕೊನೆಗೊಂಡು ತೊಗಲಕ್ ಮನೆತನದ ಆಳ್ವಿಕೆ ಉತ್ತರ ಭಾರತದಲ್ಲಿ ಪ್ರಾರಂಭವಾಗಿತ್ತು. ಮಹಮ್ಮದ್ ಬಿನ್ ತೊಗಲಕ್‌ನು ದಖನ್ ಪ್ರಸ್ಥಭೂಮಿಯವರೆಗೂ ರಾಜ್ಯವನ್ನು ವಿಸ್ತರಿಸಿದನು. ಅವನು ತನ್ನ ಹತ್ತಿರದ ಸಂಬಂಧಿ ಬಹಾವುದ್ದೀನ್‌ನನ್ನು ತನ್ನ ರಾಜ್ಯದ ದಕ್ಷಿಣ ಪ್ರದೇಶಗಳ ಮಾಂಡಲಿಕನಾಗಿ ನೇಮಿಸಿದನು. ಕ್ರಿ.ಶ. 1326ರಲ್ಲಿ ಬಹಾವುದ್ದೀನನು ಮಹಮ್ಮದ್ ಬಿನ್ ತೊಗಲಕ್‌ನ ವಿರುದ್ಧ ದಂಗೆಯೆದ್ದುದರಿಂದ ಅವನನ್ನು ಶಿಕ್ಷಿಸಲು ತೊಗಲಕ್‌ನು ದೊಡ್ಡ ಸೈನ್ಯವನ್ನು ಕಳುಹಿಸಿದನು. ಬಹಾವುದ್ದೀನನು ತೊಗಲಕ್‌ನ ಸೈನ್ಯದಿಂದ ಪರಾಜಿತನಾಗಿ ರಕ್ಷಣೆಗಾಗಿ ವಾರಂಗಲ್ಲಿಗೆ ಓಡಿಹೋದನು. ತೊಗಲಕ್‌ನ ಸೈನ್ಯವು ಅವನನ್ನು ಹಿಂಬಾಲಿಸಿ ವಾರಂಗಲ್ಲನ್ನು ಮುತ್ತಿ ನಾಶ ಪಡಿಸಿತು. ಬಹಾವುದ್ದೀನನು ಅಲ್ಲಿಂದ ಕಂಪಿಲಿರಾಯನ ಆಸ್ಥಾನಕ್ಕೆ ಓಡಿ ಬಂದನು. ತೊಗಲಕ್ ಸೈನ್ಯ ಕಂಪಿಲಿಯನ್ನು ಮುತ್ತಿ ಸರ್ವನಾಶಪಡಿಸಿತು. ಅನಂತರ ಬಹಾವುದ್ದೀನನ್ನು ಬಲ್ಲಾಳನ ರಾಜಧಾನಿಗೆ ಧಾವಿಸಿದನು. ವಾರಂಗಲ್ ಮತ್ತು ಕಂಪಿಲಿ ಮನೆತನಗಳಿಗೆ ಒದಗಿಸಿದ ವಿನಾಶವನ್ನರಿತ ಬಲ್ಲಾಳನು

ಬಹಾವುದ್ದೀನನ್ನು ಬಂಧಿಸಿ ತೊಗಲಕ್‌ನ ಸೈನ್ಯಕ್ಕೆ ಒಪ್ಪಿಸಿದನು. ಬಹಾವುದ್ದೀನನನ್ನು ದೆಹಲಿಗೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಚರ್ಮ ಸುಲಿಸಿ ಕೊಲ್ಲಲಾಯಿತು.

ತೊಗಲಕ್‌ನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ಸಂತತಿಯ ಹೊರತಾಗಿ ದಕ್ಷಿಣ ಭಾರತದ ಎಲ್ಲ ಪ್ರಸಿದ್ಧ ರಾಜಮನೆತನಗಳೂ ನಿರ್ನಾಮವಾದವು. ದಕ್ಷಿಣ ಭಾರತವನ್ನು ಮಹಮ್ಮದೀಯರ ದಾಳಿಯಿಂದ ರಕ್ಷಿಸಲು ಬಲ್ಲಾಳನು ನಿರ್ಧರಿಸಿದನು. ಆಡಳಿತವನ್ನು ಸಜ್ಜುಗೊಳಿಸಿ ದಾಳಿಗಳನ್ನು ತಡೆಗಟ್ಟುವ ಅಜೇಯ ಸೈನ್ಯಶಕ್ತಿಯ ಸ್ಥಾಪನೆಗೆ ಬಲ್ಲಾಳನು ಹೆಚ್ಚು ಗಮನಕೊಟ್ಟನು. ರಾಜ್ಯದ ಅನೇಕ ಕಡೆಗಳಲ್ಲಿ ಸುಗಮ ರಕ್ಷಣಾ ವ್ಯವಸ್ಥೆಗಾಗಿ ಅನೇಕ ಉಪರಾಜಧಾನಿಗಳನ್ನು ಸ್ಥಾಪಿಸಿದನು. ತುಳುನಾಡಿನ ಬಾರಕನೂರು, ತಮಿಳುನಾಡಿನ ತಿರುವಣ್ಣಾಮಲೈ ಮತ್ತು ತುಂಗಭದ್ರಾ ತೀರದ ಹೊಸ ಪಟ್ಟಣಗಳನ್ನು ಉಪರಾಜಧಾನಿಯಗಳಾಗಿ ಮಾಡಿಕೊಂಡು ಅಲ್ಲಿ ಬಲವಾದ ರಕ್ಷಣಾ ಪಡೆಗಳನ್ನು ಸ್ಥಾಪಿಸಿದನು. ಸಾಮ್ರಾಜ್ಯದಲ್ಲಿ ವ್ಯಾಪಕವಾದ ಸಂಚಾರ ಕೈಗೊಂಡು ಸಂಸ್ಥಾನಿಕರಿಗೂ, ಮಾಂಡಲಿಕರಿಗೂ, ಪಾಳೆಯಗಾರರಿಗೂ ದಕ್ಷಿಣ ಭಾರತ ಎದುರಿಸಬೇಕಾಗಿದ್ದ ಉಪದ್ರವವನ್ನು ಮನವರಿಕೆ ಮಾಡಿಕೊಟ್ಟು ಐಕಮತ್ಯಕ್ಕಾಗಿ ಕರೆ ನೀಡಿದನು. ತಿರುಪತಿ, ಕಂಚಿ ಮೊದಲಾದ ಧರ್ಮ ಕ್ಷೇತ್ರಗಳಲ್ಲಿ ಸಂಚರಿಸಿ ವಿಶೇಷ ಪೂಜಾರ್ಚನೆಗಳನ್ನು ನೆರವೇರಿಸಿದನು. ಕ್ರಿ.ಶ. 1339ರಲ್ಲಿ ತುಂಗಭದ್ರಾ ತೀರದಲ್ಲಿ ಹೊಸ ಪಟ್ಟಣವನ್ನು ಸ್ಥಾಪಿಸಿ ಅಲ್ಲಿ ತನ್ನ ಕುಮಾರನಾದ ವಿಜಯ ವಿರೂಪಾಕ್ಷ ಬಲ್ಲಾಳನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದನು. ವೀರಬಲ್ಲಾಳನು ತುಂಗಭದ್ರಾ ತೀರದಲ್ಲಿ ಸ್ಥಾಪಿಸಿದ ಪಟ್ಟಣವನ್ನು ಹೊಸಪಟ್ಟಣ, ವಿಜಯ ವಿರೂಪಾಕ್ಷಪುರ, ಹೊಸವೀಡು, ಹೊಸದುರ್ಗ ಎಂಬುದಾಗಿ ಶಾಸನಗಳಲ್ಲಿ ಹೆಸರಿಸಲಾಗಿದೆ. ಬಲ್ಲಾಳನು ಕಟ್ಟಿಸಿದ ಈ ಹೊಸ ಪಟ್ಟಣವೇ ಮುಂದೆ ವಿಜಯನಗರವೆಂದು ಪ್ರಸಿದ್ಧಿಗೆ ಬಂದಿತೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ವೀರಬಲ್ಲಾಳನು ನಿರಂತರ ಪ್ರಯಾಸದಿಂದ ಇಡೀ ದಕ್ಷಿಣ ಭಾರತದಲ್ಲಿ ಸಾರ್ವಭೌಮತ್ವವನ್ನು ಸ್ಥಾಪಿಸಿ ರಾಮೇಶ್ವರದಲ್ಲಿ ಒಂದು ವಿಜಯ ಸ್ತಂಭವನ್ನು ನಡೆಸಿದನು.

ಕ್ರಿ.ಶ. 1334ರ ವೇಳೆಗೆ ಮಧುರೆಯಲ್ಲಿ ಮಹಮ್ಮದೀಯ ಆಳ್ವಿಕೆ ಸ್ಥಾಪನೆಯಾಯಿತು. ಅಲ್ಲಿ ಹಲವೇ ವರ್ಷಗಳಲ್ಲಿ ಅನೇಕ ಸುಲ್ತಾನರು ಅಧಿಕಾರ ಲಾಲಸೆಯಿಂದ ಕೊಲೆಗೀಡಾದರು. ಕ್ರಿ.ಶ. 1342ರ ವೇಳೆಗೆ ಅಲ್ಲಿ ಘಿಯಾಸುದ್ದೀನ್ ಎಂಬುವನು ಸುಲ್ತಾನನಾಗಿದ್ದನು. ಅವನು ಹಿಂದೂಗಳಿಗೆ ಉಗ್ರದಂಡನೆ ನೀಡುತ್ತ ಮತಾಂಧನಾಗಿದ್ದನು. ಅವನ ಉಪದ್ರವವನ್ನು ಕುರಿತಾದ ವರದಿಗಳು ಬಲ್ಲಾಳನಿಗೆ ತಲುಪಿದವು. ಬಲ್ಲಾಳನು ಅಪರಿಮಿತ ಸೈನ್ಯಗಳೊಡನೆ ಮಧುರದತ್ತ ಧಾವಿಸಿದನು. ಕೊಪ್ಪಂ ಕಣ್ಣಾನೂರಿನ ಬಳಿಯಲ್ಲಿ ಸುಲ್ತಾನನ ಸೈನ್ಯ ಬಲ್ಲಾಳನನ್ನು ಎದುರಿಸಿ ಸಂಪೂರ್ಣವಾಗಿ ಸೋತು ಶರಣಾಗತವಾಗಿ ಅಲ್ಲಿಂದ ಹೊರಟು ಹೋಗಲು ಹದಿನಾಲ್ಕು ದಿವಸಗಳ ಅವಧಿಯನ್ನು ಬೇಡಿತು. ಬಲ್ಲಾಳನು

ಉದಾರವಾಗಿ ಅವರ ಬೇಡಿಕೆಗೆ ಒಪ್ಪಿಗೆ ನೀಡಿದನು. ಈ ಅವಧಿಯಲ್ಲಿ ಪಕ್ಕದ ಅರಣ್ಯದಲ್ಲಿ ಹೊಯ್ಸಳ ಸೈನ್ಯವು ಶಿಬಿರವನ್ನೇರ್ಪಡಿಸಿಕೊಂಡಿತ್ತು. ಶತ್ರುಗಳ ಭೀತಿ ನಿವಾರಣೆಯಾಯಿತೆಂದು ಹೊಯ್ಸಳ ಸೈನ್ಯ ಅಜಾರೂಕತೆಯಿಂದ ನಿರಾಯುಧವಾಗಿದ್ದ ಸಮಯದಲ್ಲಿ ಸುಲ್ತಾನನ ಸೈನ್ಯ ಆಕ್ರಮಣ ಮಾಡಿತು. ಮುಂದಿನ ದುರಂತವನ್ನು ಪ್ರತ್ಯಕ್ಷದರ್ಶಿಯಾದ ಇಬನ್ ಬತೂತನು ಯಥಾವತ್ತಾಗಿ ವಿವರಿಸಿರುವನು. ಇವನ ಪ್ರಕಾರ ಮಧ್ಯಾಹ್ನದ ವೇಳೆಯಲ್ಲಿ ಹೊಯ್ಸಳ ಸೈನಿಕರು ಕುದುರೆಗಳನ್ನು ಮೇಯಲು ಬಿಟ್ಟು ವಿಶ್ರಾಂತಿ ಪಡೆಯುತ್ತಿದ್ದಾಗ ಈ ದಾಳಿ ನಡೆಯಿತು. ಮಹಮ್ಮದೀಯ ಸೈನ್ಯದ ಅನಿರೀಕ್ಷಿತ ದಾಳಿಯಿಂದ ಕಂಗೆಟ್ಟ ಹೊಯ್ಸಳ ಸೈನ್ಯವು ದಿಕ್ಕುದಿಕ್ಕಿಗೆ ಓಡತೊಡಗಿತು. ಸುಮಾರು 80 ವರ್ಷ ವಯಸ್ಸಿನ ವೀರಬಲ್ಲಾಳ ಚಕ್ರವರ್ತಿ ಕುದುರೆಯೇರಿ ಸೈನ್ಯದಲ್ಲಿ ಸ್ಥೈರ್ಯ ಮೂಡಿಸುವ ಪ್ರಯತ್ನದಲ್ಲಿದ್ದಾಗ ವೈರಿಗಳಿಗೆ ಸೆರೆ ಸಿಕ್ಕಿದನು. ವೃದ್ಧ ಬಲ್ಲಾಳನನ್ನು ಮಧುರೆಗೆ ಕರೆದುಕೊಂಡು ಹೋಗಿ ಸುಲ್ತಾನನ ಮುಂದೆ ನಿಲ್ಲಿಸಲಾಯಿತು. ಸುಲ್ತಾನನು ಹೇರಳವಾದ ಧನಕನಕವನ್ನು ದೋರಸಮುದ್ರದಿಂದ ತರಿಸಿಕೊಟ್ಟರೆ ಅವನನ್ನು ಬಿಡುಗಡೆ ಮಾಡುವುದಾಗಿ ತಿಳಿಸಿದನು. ಅಪರಿಮಿತ ಐಶ್ವರ್ಯವನ್ನು ಬಲ್ಲಾಳನಿಂದ ಪಡೆದ ಕೂಡಲೇ ವೃದ್ಧ ಚಕ್ರವರ್ತಿಯನ್ನು ಕೊಲ್ಲಿಸಿ ಅವನ ಚರ್ಮವನ್ನು ತೆಗೆಸಿ ಅದಕ್ಕೆ ದ್ರಾವಣಗಳನ್ನು ಸಿಂಪಡಿಸಿ ಮಧುರೆಯ ಕೋಟೆಯ ಗೋಡೆಯ ಮೇಲೆ ನೇತುಹಾಕಿಸಲಾಯಿತು. ಮೂರನೇ ವೀರ ಬಲ್ಲಾಳನು ಕೊಲೆಯಾದ ನಂತರ ಅವನ ಮಗ ವಿಜಯ ವಿರೂಪಾಕ್ಷ ಬಲ್ಲಾಳನು ನಾಲ್ಕನೇ ಬಲ್ಲಾಳ ಎಂಬ ಹೆಸರಿನಿಂದ ಸಿಂಹಾಸನಕ್ಕೆ ಬಂದರೂ ಹೊಯ್ಸಳ ರಾಜ್ಯ ರವಿಯು ಆಗಲೇ ಅಸ್ತಂಗತನಾಗಿದ್ದನು.

ಮುಮ್ಮಡಿ ವೀರಬಲ್ಲಾಳನು ಪರಾಕ್ರಮದಿಂದಲೂ ವಿಚಕ್ಷಣತೆಯಿಂದಲೂ ಸಾಮ್ರಾಜ್ಯದ ರಕ್ಷಣೆಗಾಗಿ ಕೊನೆಯವರೆಗೂ ಹೋರಾಡಿ ಹೋಳಾಗಿದ್ದ ರಾಜ್ಯವನ್ನು ಒಂದುಗೂಡಿಸಿದನು. ಕೈಬಿಟ್ಟು ಹೋಗಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡನು. ದಕ್ಷ ಆಡಳಿತವನ್ನು ಸ್ಥಾಪಿಸಿದನು. ನಾಡಿನಲ್ಲಿ ನವಹುಮ್ಮಸ್ಸನ್ನು ಮೂಡಿಸಿದನು. ವಿಧಿವಿಪರ್ಯಾಸದಿಂದ ಮಡಿದನು. ದಕ್ಷಿಣ ಭಾರತವನ್ನು ಮಹಮ್ಮದೀಯ ದಾಳಿಗಳಿಂದ ರಕ್ಷಿಸಲು ಸಮರ್ಥ ಸಾರ್ವಭೌಮತ್ವವನ್ನು ಸ್ಥಾಪಿಸುವುದು ಅವನ ಸಂಕಲ್ಪವಾಗಿತ್ತು. ಅವನ ಸಂಕಲ್ಪ ಇನ್ನೇನು ನೆರವೇರಿತು ಎನ್ನುವಷ್ಟರಲ್ಲಿ ಅವನು ಹುತಾತ್ಮನಾದನು. ಆದರೆ ಅವನ ಸಂಕಲ್ಪಕ್ಕೆ ಚ್ಯುತಿ ಬರಲಿಲ್ಲ. ಅವನ ಧ್ಯೇಯ ವಿಜಯನಗರ ಸ್ಥಾಪನೆಯ ಮೂಲಕ ನೆರವೇರಿದಂತಾಯಿತು. ಮೂರನೇ ವೀರಬಲ್ಲಾಳನ ಮರಣವಾರ್ತೆಯು ಸಾಮ್ರಾಜ್ಯದಲ್ಲಿ ಪ್ರಸರಿಸು ತ್ತಿದ್ದಂತೆಯೆ ಸಾಮ್ರಾಜ್ಯವು ಅದೃಶ್ಯವಾಯಿತು. ಅವನ ಮಗನಾದ ನಾಲ್ಕನೇ ಬಲ್ಲಾಳನು ವಿಜಯ ವಿರೂಪಾಕ್ಷ ಬಲ್ಲಾಳ ಎಂಬ ಹೆಸರಿನಿಂದ ತನ್ನ ಆಳ್ವಿಕೆಯನ್ನು ಪ್ರಾರಂಭಿಸಲೆತ್ನಿಸಿದನು. ಆದರೆ ಮೂರನೇ ವೀರಬಲ್ಲಾಳನ ಮರಣದೊಡನೆ ಹೊಯ್ಸಳ ಸಾಮ್ರಾಜ್ಯವು ಆಗ ತಾನೇ ಅಂಕುರಾರ್ಪಣವಾದ ವಿಜಯ ನಗರ ಸಾಮ್ರಾಜ್ಯದಲ್ಲಿ ಲೀನವಾಯಿತು.

ಸಾಮ್ರಾಜ್ಯದ ವೈಶಾಲ್ಯವೂ, ತಮಿಳುನಾಡಿನ ರಾಜಕೀಯದಲ್ಲಿ ಹೊಯ್ಸಳ ಸಾಮ್ರಾಟರ ವ್ಯಾಪಕವಾದ ತೊಡಗುವಿಕೆಯೂ, ಸೇವುಣ-ಹೊಯ್ಸಳ ಸಂತತಿಗಳ ಮಧ್ಯೆ ನಿರಂತರವಾಗಿ ನಡೆದ ಘರ್ಷಣೆಗಳೂ, ಸಾಮ್ರಾಜ್ಯವನ್ನು ವಿಭಜಿಸಿದುದೂ, ಅದಕ್ಷ ರಾಜರ ಆಳ್ವಿಕೆಯೂ ಮಿಗಿಲಾಗಿ ಉತ್ತರದಿಂದ ಪ್ರಾರಂಭವಾದ ಮಹಮ್ಮದೀಯ ಆಕ್ರಮಣಗಳೂ ಹೊಯ್ಸಳ ಸಾಮ್ರಾಜ್ಯದ ಮತ್ತು ಸಂತತಿಯ ವಿನಾಶಕ್ಕೆ ಸಹಕಾರಿಯಾದವು.

**ಆಧಾರಗಳು/ಅಡಿಟಿಪ್ಪಣಿಗಳು**

1) ಗುರುರಾಜಚಾರ್, ಎಸ್. 'ಸಮ್ ಅಸ್ಪೆಕ್ಟ್ ಆಫ್ ಎಕನಾಮಿಕ್ಸ್ ಅಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ' (Some Aspects of Economics and Social Life in Karnataka) ಕ್ರಿ.ಶ. 1000–1300 ಪ್ರಸಾರಾಂಗ, ಮೈಸೂರು, 1974, ಪು.1.
2) ಬಸವರಾಜ, ಕೆ.ಆರ್. 'ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ' ಚಾಲುಕ್ಯ ಪ್ರಕಾಶನ, ಧಾರವಾಡ, 1984 ಪುಟ 4 ಮತ್ತು 5.
3) ಎ.ಕ.ಸಂ. VII ನಾ.ಮ. ಎನ್.ಐ. 1145 ಕ್ರಿ.ಶ. ನಂ.64.
4) ಮೈ.ಪ್ರಾ.ವ. 1923 ನಂ. I ಪುಟ 31–34.
5) ಎ.ಕ. V (0) ಚಿ.ಬಿ. II 1183, ನಂ.37, ಎಲ್ಲೆದಹಳ್ಳಿ.
6) ಶಾಸ್ತ್ರಿ ಕೆ.ಎ.ಎನ್. 'Source of Indian History with Special Reference to South India, Bombay, 1964. ಪು.64.
7) ಗುರುರಾಜಾಚಾರ್ ಎಸ್. ಪೂರ್ವೋಕ್ತ ಪು.2
8) ವಿದ್ಯಾಚಕ್ರವರ್ತಿ, ಗದ್ಯಕರ್ಣಮಿತ್ರ–A Critical Study ಮತ್ತು ಎನ್.ಎಸ್.ಜಾನಕಿಯವರ ಸಂಪಾದನೆ, ಅಪ್ರಕಟಿತ ಪ್ರಬಂಧ, ಮದ್ರಾಸ್, 1965 ಪು.43.
9) ರುದ್ರಭಟ್ಟ: ಜಗನ್ನಾಥ ವಿಜಯ ಸಂ: ಶಾಮಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, 1976, ಸರ್ಗ 10 ಕವನ 132 ಮತ್ತು 133.
10) ಜನ್ನ: ಅನಂತನಾಥಪುರಾಣ: ಸಂ. ದೇವೀರಪ್ಪ.ಹೆಚ್ಚ, 2ನೇ ಸರ್ಗ, ಪದ್ಯ 74ರ ವಚನ, ಕೆ.ಎ.ಎಸ್. ಮೈಸೂರು.
11) ನೇಮಿಚಂದ್ರ: ಲೀಲಾವತಿ ಪ್ರಬಂಧಂ ಸಂ. ವೆಂಕಟರಾಮಪ್ಪ ಮತ್ತು ಡಿ.ಜವರೇಗೌಡ, ಶಾರದಾ ಮಂದಿರ, ಮೈಸೂರು ಸರ್ಗ XIII, ಪು.283 1966.
12) ನಯಸೇನ: ಧರ್ಮಾಮೃತ ಸಂ: ಶಾಮಶಾಸ್ತ್ರಿ ಆರ್. ಮೈಸೂರು 1926, ಸರ್ಗ 10 ಪುಟ 8 ಭಾಗ 2.
13) ಪದ್ಮನಾಲ್ಕ: ಪದ್ಮರಾಜ ಪುರಾಣ. ಸಂ: ಆರ್.ಸಿ.ಹೀರೆಮಟ ಧಾರವಾಡ, ಮುರುಗರಾಜ ಮಠ ಪ್ರಕಾಶನ 1958 ಸರ್ಗ 10 ಪುಟಗಳು 174–258.

# ಅಧ್ಯಾಯ 2
# ಹೊಯ್ಸಳ ರಾಜ ವಿಷ್ಣುವರ್ಧನನ ಆಡಳಿತ

## 2.1 ರಾಜಕೀಯ ಪರಿಸ್ಥಿತಿ

ವಿಷ್ಣುವರ್ಧನನು ಮೊದಲಿನಿಂದ ಕೊನೆಯುವರೆಗೂ, ವೈಭವೋ ಪೇತ ಸೈನಿಕ ಕಾರ್ಯಾಚರಣೆ ಗಳಲ್ಲಿಯೇ ತೊಡಗಿರುತ್ತಿದ್ದನು. ಚಾಲುಕ್ಯರ ಸಾರ್ವಭೌಮತ್ವದ ನೊಗವನ್ನು ಕಿತ್ತೆಸೆಯಲು ಇವನು ಮಾಡಿದ ಸತತ ಪ್ರಯತ್ನಗಳು ವಿಫಲವಾದರೂ ತನ್ನ ಭೂಪ್ರದೇಶವನ್ನು ಒಂದು ರಾಜ್ಯದ ಘನತೆಗೆ ಏರಿಸಿದ ಕೀರ್ತಿ ಇವನಿಗೆ ಸಲ್ಲಲೇಬೇಕು. ಪ್ರೊಫೆಸರ್ ಕೊಲ್ಪೆರವರು ಹೇಳುವಂತೆ, ಇದು ಮುಂದೆ ಇವನ ಉತ್ತರಾಧಿಕಾರಿಗಳಿಗೆ ರಾಜ್ಯದ ಅಭಿವೃದ್ಧಿಯ ಹಾದಿ ಸುಗಮವಾಗಿ ಅಲ್ಲಿಂದ ಅದು ದಕ್ಷಿಣದ ಅತ್ಯಂತ ಪ್ರಬಲ ಸಾಮ್ರಾಜ್ಯಗಳಲ್ಲಿ ಒಂದಾಗಿ ಮೆರೆಯಲು ದಾರಿಯಾಯಿತು. ಇವನ ಬಿರುದುಗಳು, ಹೊಗಳಿಕೆಗಳು ಮತ್ತು ವಿಜಯಗಳು ಅನೇಕ ಶಿಲಾಶಾಸನಗಳಲ್ಲಿ ಕಂಡುಬರುತ್ತವೆ. 'ತ್ರಿಭುವನಮಲ್ಲ', 'ಭುಜಬಲಗಂಗ' ಅವುಗಳಲ್ಲಿ ಕೆಲವು. ಅವನಿಗೆ ಬಿಟ್ಟಿಗ ಮತ್ತು 'ಬಿಟ್ಟಿದೇವ' ಎಂಬ ಹೆಸರುಗಳೂ ಇದ್ದವು. ಯುವರಾಜನಿದ್ದಾಗ ಬಿಟ್ಟಿದೇವನು ತೊಣ್ಣೂರಿನ ರಾಜ್ಯಪಾಲನಾಗಿದ್ದ ನೆಂದು ತೋರುವುದು. ಅಲ್ಲಿ ಪ್ರಸಿದ್ಧ ಶ್ರೀವೈಷ್ಣವ ಗುರು ಶ್ರೀ ರಾಮಾನುಜಾಚಾರ್ಯರನ್ನು ಭೇಟಿ ಮಾಡಿದ ನಂತರ ಅವರ ಪರಮ ಶಿಷ್ಯನಾಗಿ ಬಿಟ್ಟನು. ಯುವರಾಜನಾಗಿದ್ದಾಗ ಸೈನ್ಯದಳವನ್ನು ಮುನ್ನಡೆಸುವ ಸಾಕಷ್ಟು ಅನುಭವ ಪಡೆದಿದ್ದನು ಮತ್ತು ಒಂದು ದೊಡ್ಡ ರಾಜ್ಯದ ಸ್ವತಂತ್ರ ಪ್ರಭುವಾಗುವ ಮಹತ್ವಾಕಾಂಕ್ಷೆಯನ್ನು ಆಗಲೇ ರೂಢಿಸಿಕೊಂಡಿದ್ದನು.

ವಿಷ್ಣುವರ್ಧನನು ಕ್ರಿ.ಶ. 1106ರಲ್ಲಿ ಹೊಯ್ಸಳ ಸಿಂಹಾಸನವನ್ನೇರಿದನು. ಅವನ ಆಳ್ವಿಕೆಯ ಮೊದಲ ಹತ್ತು ವರುಷಗಳು ತನ್ನ ಸ್ಥಾನವನ್ನು ಒಗ್ಗೂಡಿಸುವುದರಲ್ಲಿಯೇ ಕಳೆದನು. ಅದು ಪೂರ್ಣ ಸಿದ್ಧತೆಯ ಕಾಲವಾಗಿತ್ತು. ಬಹುಶಃ ಅವನು ತನ್ನ ರಾಜಧಾನಿಯ ಕೋಟೆಕೊತ್ತಲಗಳನ್ನು ಅಭಿವೃದ್ಧಿಪಡಿಸಿ, ಬಲಪಡಿಸಿದುದಲ್ಲದೆ, ಆಂತರಿಕ ಆಡಳಿತದ ದಕ್ಷತೆಯನ್ನು ಹೆಚ್ಚಿಸಿದನು ಮತ್ತು ದೊಡ್ಡ ಸೈನ್ಯವನ್ನು ಕಟ್ಟಿದನು. ಅವನು ತನ್ನ ವಿಜಯಗಳನ್ನು ಕ್ರಿ.ಶ. 1116ರಲ್ಲಿ ಪ್ರಾರಂಭಿಸಿದನು. ಅವನ ಜೀವನಯಾತ್ರೆಯ ಈ ಮುಖ್ಯ ಭಾಗವು ಶ್ರೀರಾಮಾನುಜಾಚಾರ್ಯರಿಂದ ವೈಷ್ಣವ ಧರ್ಮಕ್ಕೆ ಪರಿವರ್ತನೆಯ ನಂತರ ಪ್ರಾರಂಭವಾಯಿತೆಂದು ಹೇಳಲಾಗಿದೆ.

ವಿಜಯಕ್ಕಾಗಿ ಮತ್ತು ಸೈನಿಕ ವೈಭವಕ್ಕಾಗಿದ್ದ ಅವನ ಒತ್ತಾಸೆ ಮತ್ತು ಪಶ್ಚಿಮ ಚಾಲುಕ್ಯರಿಗೆ ಅಡಿಯಾಳಾಗುವುದನ್ನು ಕಿತ್ತೆಸೆಯುವ ಅವನ ಹಂಬಲ–ವಿಜಯದ ಕಡೆ ಮುನ್ನುಗ್ಗಲು ಮತ್ತು ಸ್ಫೂರ್ತಿ ತುಂಬಲು ಈ ಎರಡು ಧ್ಯೇಯಗಳು ಸಾಕಾಗಿದ್ದವು.

ಅವನ ಮೊದಲ ಗಮನವು, ಹನ್ನೊಂದನೆಯ ಶತಮಾನದಲ್ಲಿ ಚೋಳರು ಆಕ್ರಮಿಸಿ ಕೊಂಡಿದ್ದ ನೆರೆಯ ಪ್ರಾಂತ್ಯವಾದ ಗಂಗವಾಡಿಯ ಕಡೆ ಹರಿಯಿತು. ಚಾಲುಕ್ಯರ ಅಧಿಕಾರಿ ಮತ್ತು ನಂಬಿಕಸ್ಥ ಪಾಳೆಯಗಾರನಾದ ವಿನಯಾದಿತ್ಯನು ಗೆದ್ದನು ಮತ್ತು ಪಶ್ಚಿಮದ ಅರ್ಧ ರಾಜ್ಯವು ಇನ್ನೂ ಅವರ ಅಧೀನದಲ್ಲಿಯೇ ಇತ್ತು. ಚೋಳರು, ತಲಕಾಡಿನ ಗಂಗರ, ರಾಜಕೀಯ ಉತ್ತರಾಧಿಕಾರಿಗಳು ತಾವೇ ಎಂದು ಭಾವಿಸಿದ್ದುದು ಗಂಗವಾಡಿಯಲ್ಲಿ ಚೋಳರ ಅಧಿಪತ್ಯವು ಇನ್ನೂ ಮುಂದು ವರೆಯುತ್ತಲೇ ಹೋದದ್ದು ವಿಷ್ಣುವರ್ಧನನಿಗೆ ಸಹಿಸಲಾಗಲಿಲ್ಲ. ಅವನು ಗಂಗರ ವಂಶಕ್ಕೆ ಸೇರಿದ ಪ್ರಸಿದ್ಧ ಸೈನ್ಯಾಧಿಕಾರಿ ಗಂಗರಾಜನನ್ನು[1] ಚೋಳರ ವಿರುದ್ಧ ಕಳುಹಿಸಿದನು. ಚೋಳರ ಸೇನಾಧಿಪತಿ ಅದಿಯಾಮ ಮತ್ತಿತರರು ಸೋಲಿಸಲ್ಪಟ್ಟರು ಮತ್ತು ವಿಷ್ಣುವರ್ಧನನು ಖುದ್ದಾಗಿ ತಾನೇ ಇದ್ದು ಚೋಳರ ಸೇನೆಯನ್ನು ಬೆನ್ನಟ್ಟಿದನು. ಮೈಸೂರಿನಿಂದ ಅವರನ್ನು ಹೊರಕ್ಕೆ ದಬ್ಬಲಾಯಿತು.[2] ತಲಕಾಡು ಕ್ರಿ.ಶ. 1116ರಲ್ಲಿ ಹಸ್ತಗತವಾಯಿತು. ಅವನಿಗೆ 'ತಲಕಾಡುಗೊಂಡ' ಮತ್ತು 'ಭುಜಬಲ ವೀರಗಂಗ ಪ್ರತಾಪ ಹೊಯ್ಸಳದೇವ' ಎಂಬ ಬಿರುದುಗಳು ಸಂದವು. ಈ ವಿಜಯದ ನಂತರ ತಲಕಾಡಿನ 'ಕೀರ್ತಿನಾರಾಯಣ ದೇವಾಲಯ' ಮತ್ತು 'ಬೇಲೂರಿನ ವಿಜಯನಾರಾಯಣ ದೇವಾಲಯ'ಗಳು ನಿರ್ಮಾಣಗೊಂಡವು. ಇವರ ನಂತರ ಕೊಂಗಾಳ್ವರು ಮತ್ತು ಚೆಂಗಾಳ್ವರು ಸೋಲಿಸಲ್ಪಟ್ಟರು ಮತ್ತು ಡಾ. ಡಿರೆಟ್ ಅವರು ಹೇಳುವಂತೆ ಅವನ ವಿವಾಹವು ಕೊಂಗಾಳ್ವರ ರಾಜಕುಮಾರಿಯಾದ ಚಂದಲಾದೇವಿಯೊಡನೆ ನೆರವೇರಿತು.

ನಿಡುಗಲ್ ಚೋಳರ ರಾಜ ಇರುಂಗೋಳನೂ ಸಹ ಸೋಲಿಸಲ್ಪಟ್ಟನು ಮತ್ತು ಅವನು ನೀಲಗಿರಿಯವರೆಗೂ ಮುಂದುವರೆದನು ಮತ್ತು ಕಂಚಿಯುವರೆವಿಗೂ ತಲುಪಿದನು. ಅವನ ಅಧಿಕಾರಿಗಳು ಹೊಸಗುಂದದ ಸಂತಾರರಿಂದ ಮತ್ತು ತುಳು ದೇಶದ ಅಲೂಪರಿಂದ ಕಪ್ಪ ಕಾಣಿಕೆಯುಗಳನ್ನು ವಸೂಲು ಮಾಡಿದರು. ನೊಲಂಬವಾಡಿಯಲ್ಲಿ ನೊಲಂಬರ ನಂತರ ಗದ್ದುಗೆ ಏರಿದ ಉಚ್ಚಂಗಿಯ ಪಾಂಡ್ಯರು 'ದುಮ್ಮೆ' ಎಂಬಲ್ಲಿ ಅಪಮಾನಿತರಾದರು ಮತ್ತು ಕ್ರಿ.ಶ. 1117ರಲ್ಲಿ ವಿಷ್ಣುವರ್ಧನನು 'ನೊಲಂಬವಾಡಿಗೊಂಡ' ಎಂಬ ಬಿರುದಿಗೆ ಪಾತ್ರನಾದನು. ಬಹುಶಃ ಇವನು ಕಂಚಿಯ ಮೇಲೆ ಆಕ್ರಮಣ ಮಾಡಿ, ರಾಮೇಶ್ವರದವರೆಗೂ ಮುಂದುವರೆದನು ಮತ್ತು 'ಕಂಚಿಗೊಂಡ' ಎಂಬ ಬಿರುದಿಗೆ ಪಾತ್ರನಾದನು.[3]

ದ್ವಾರಸಮುದ್ರಕ್ಕೆ ಹಿಂದಿರುಗಿ ಬಂದ ಮೇಲೆ ತನ್ನ ವಿಜಯಗಳನ್ನು ಒಗ್ಗೂಡಿಸುವುದರಲ್ಲಿ ಮತ್ತು ತನ್ನ ಸೈನ್ಯವನ್ನು ಸಂಘಟಿಸುವುದರಲ್ಲಿ ಸ್ವಲ್ಪ ಕಾಲ ಕಳೆದನು.

ವಸಾಹತುಶಾಹಿಯ ನೊಗವನ್ನು ಕಿತ್ತೆಸೆದು ಸ್ವತಂತ್ರನಾಗುವುದೇ ಅವನ ಬಹುದಿನದ ಮಹತ್ವಾಕಾಂಕ್ಷೆಯಾಗಿತ್ತು. ಅವನ ಪ್ರಸಿದ್ಧ ಸೇನಾನಿ ಗಂಗರಾಜನು 'ಕಣ್ಣೆಗಾಲ'ದಲ್ಲಿ ಬೀಡುಬಿಟ್ಟಿದ್ದ ಚಾಲುಕ್ಯ ಸೇನೆಯನ್ನು ಹೊರಕ್ಕಟ್ಟಿದನು. ಈ ವಿಜಯದ ನಂತರವೂ, ವಿಷ್ಣುವರ್ಧನನು, ವಾಸ್ತವವಾಗಿ ಅವನು ಸ್ವತಂತ್ರನಾದರೂ, ಪಶ್ಚಿಮ ಚಾಲುಕ್ಯರ ಸಾಮಂತ ಅರಸನಾಗಿ ಮುಂದುವರೆಯುತ್ತಲೇ ಹೋದನು. ಆರನೇ ವಿಕ್ರಮಾದಿತ್ಯನು ಇರುವವರೆಗೂ ಅವನು ಸಾಮಂತನಾಗಿಯೇ ಉಳಿದನು. ಚಾಲುಕ್ಯರ ನೊಗವನ್ನು ಕಿತ್ತೆಸೆಯಲು ಮತ್ತೊಂದು ಪ್ರಯತ್ನ ಮಾಡಿದರೂ ಸಫಲನಾಗಲಿಲ್ಲ. ಕ್ರಿ.ಶ. 1138ರಲ್ಲಿ ಅವನು ತುಂಗಭದ್ರೆಯನ್ನು ದಾಟಿದನು. ಹಾನಗಲ್ಲನ್ನು ಆಕ್ರಮಿಸಿದನು ಮತ್ತು ಅದರ ಮರು ವರುಷ ಜಗದ್ದೇವನ ಸೈನ್ಯದೊಂದಿಗೆ ಹೋರಾಡುತ್ತಾ ಅವನು ದ್ವಾರಸಮುದ್ರದಲ್ಲಿದ್ದನು.

ಕ್ರಿ.ಶ. 1126ರಲ್ಲಿ ಆರನೇ ವಿಕ್ರಮಾದಿತ್ಯನು ಮರಣ ಹೊಂದಿದನು ಮತ್ತು ಅವನ ನಂತರ ಸೋಮೇಶ್ವರನು, ಚಾಲುಕ್ಯ ಸಿಂಹಾಸನವನ್ನೇರಿದನು. ಹೊಸ ಚಕ್ರವರ್ತಿಯು, ವೈಭವೋಪೇತ ಪೂರ್ವಾಧಿಕಾರಿಯಂತೆ, ಸಮರ್ಥನಾಗಿರಲಿಲ್ಲ ಮತ್ತು ಸದಾ ಹೊಯ್ಸಳರ ಭಯದಲ್ಲಿಯೇ ಇದ್ದನು. ವಿಷ್ಣುವರ್ಧನನು ಈ ಅವಕಾಶವನ್ನುಪಯೋಗಿಸಿಕೊಂಡು ಉತ್ತರಕ್ಕೆ ಕದಂಬ ಭೂಪ್ರದೇಶಗಳ ಕಡೆ ದಂಡೆತ್ತಿ ಹೋದನು. ಆದರೂ ಈ ಕಾಲದ ಶಿಲಾಶಾಸನಗಳು ಸ್ಥಿರವಾಗಿ ಅವನನ್ನು 'ಮಹಾಮಂಡ ಲೇಶ್ವರ' ಎಂದೇ ಕರೆದು, ಚಾಲುಕ್ಯರಸನ ಚರಣ ಕಮಲಗಳಲ್ಲಿರುವನೆಂದೇ ಬಣ್ಣಿಸಿವೆ. ಸುಮಾರು ಕ್ರಿ.ಶ. 1140ರಲ್ಲಿ ಅವನು ಚಾಲುಕ್ಯ ಚಕ್ರವರ್ತಿಯ ವಿರುದ್ಧ ಅಪಾರ ಸೈನ್ಯದೊಡನೆ ದಂಡೆತ್ತಿ ಹೋದನು. ಇದು ವಿಷ್ಣುವರ್ಧನನ ಮಹತ್ವಾಕಾಂಕ್ಷೆಗೆ ಕೊನೆಯ ಪೆಟ್ಟಾಯಿತು. ಅವನಿಗೆ ಈ ಪೆಟ್ಟನ್ನು ಬಹುಕಾಲ ಸಹಿಸಿಕೊಳ್ಳಲಾಗಲಿಲ್ಲ. ಈ ಸೋಲಿನ ನಂತರ, ಕೂಡಲೇ ಬಂಕಾಪುರಕ್ಕೆ ಹೋದನು. ಆದರೆ, ಬಹುಬೇಗ ಅವನು ಉತ್ತರದ ಪ್ರಾಂತ್ಯಗಳ ಮೇಲೆ ತನ್ನ ಹಿಡಿತ ಕಳೆದು ಕೊಳ್ಳಲಾರಂಭಿಸಿದನು ಮತ್ತು ಅವನ ಮಗನ ಕಾಲಕ್ಕೆ ಅವು ಸಂಪೂರ್ಣವಾಗಿ ಹೊಯ್ಸಳ ಹಿಡಿತದಿಂದ ಪಾರಾಗಿ ಹೋದುವು. ಕ್ರಿ.ಶ. 1141ರಲ್ಲಿ ಅವನು ಬಂಕಾಪುರದಲ್ಲಿ ನಿಧನ ಹೊಂದಿದನು.[4] ಅಲ್ಲಿಂದ ಅವನ ಪಾರ್ಥಿವ ಶರೀರವನ್ನು ಗಂಗರಾಜನ ಮಗನಾದ ಬೊಪ್ಪದೇವ ದಂಡನಾಯಕ ಮತ್ತಿತರರಿಂದ ರಾಜಧಾನಿಗೆ ರಹಸ್ಯವಾಗಿ ತರಲಾಯಿತು. ಅನೇಕ ದಂಗೆಗಳನ್ನು ಅಡಗಿಸಿದ ನಂತರ ಮೊದಲನೇ ನರಸಿಂಹನಿಗೆ ಪಟ್ಟಾಭಿಷೇಕ ಮಾಡಲಾಯಿತು.

ವಿಷ್ಣುವರ್ಧನನ ಕೈಕೆಳಗೆ ಹೊಯ್ಸಳ ರಾಜ್ಯವು ಎಲ್ಲಾ ದಿಕ್ಕುಗಳಲ್ಲಿಯೂ ವಿಸ್ತರಿಸಿತು. ಅವನ ರಾಜ್ಯದ ಗಡಿಗಳು, ಪೂರ್ವಕ್ಕೆ ನಂಗಲಿ, ದಕ್ಷಿಣಕ್ಕೆ ಕೊಂಗು, ಚೇರಂ ಮತ್ತು ಅನೆಮಲೆ, ಪಶ್ಚಿಮಕ್ಕೆ ದಕ್ಷಿಣ ಕೆನರಾದಲ್ಲಿ ಬಾರಕೂರು, ಉತ್ತರಕ್ಕೆ ಸಾವಿಮಲೆ ಆಗಿದ್ದವು. ಉತ್ತರದಲ್ಲಿ ಅವನು ಪರ್ದೊರೆ (ಕೃಷ್ಣಾನದಿ) ಯನ್ನು ತನ್ನ ಗಡಿ ಮಾಡಿದನು.[5]

ಅವನು ಕೊಂಗು, ನಂಗಲಿ, ತಲಕಾಡು, ಗಂಗವಾಡಿ, ನೊಲಂಬವಾಡಿ, ಬನವಾಸಿ, ಹಾನಗಲ್, ಕಾಳಿಗೆರೆ, ಹಲಸಿಗೆ ಮತ್ತು ಬೆಲವೊಲ ಪ್ರಾಂತ್ಯಗಳನ್ನು ಆಳಿದನು.[6] ಹೊಸ ರಾಜಧಾನಿಗಳು ಬಂಕಾಪುರ ಮತ್ತು ತಲಕಾಡು ಯಾದವಪುರ ಮತ್ತು ಕೊಲಾಲ ಮೊದಲಾದವು ಸ್ಥಾಪಿಸಲ್ಪಟ್ಟವು.

ವಿಸ್ಮಯಗೊಳಿಸುವ ಇವನ ವಿಜಯಗಳಿಂದ ಹೊಯ್ಸಳ ಪ್ರಭುತ್ವವು ಅತ್ಯುನ್ನತ ಪದಕ್ಕೇರಿತು. ಪಶ್ಚಿಮ ಚಾಲುಕ್ಯರ ಪರಮಾಧಿಕಾರದಿಂದ ಹೊರಬಂದು ಸ್ವತಂತ್ರನಾಗಬೇಕೆಂಬ ಅವನ ಬಹುದಿನದ ಮಹತ್ವಾಕಾಂಕ್ಷೆ ಪೂರ್ಣತಃ ಈಡೇರದಿದ್ದರೂ ನಿಸ್ಸಂದೇಹವಾಗಿಯೂ ವಿಷ್ಣುವರ್ಧನನು ಹೊಯ್ಸಳ ಹಿರಿಮೆಯ ಸ್ಥಾಪಕನೇ ಹೌದು.

ವಿಷ್ಣುವರ್ಧನನು ಅನೇಕ ಸಮರ್ಥ ಮತ್ತು ಕೃತಜ್ಞ ಸೇನಾನಿಗಳನ್ನೂ, ಮಂತ್ರಿಗಳನ್ನೂ ಪಡೆದ ಅದೃಷ್ಟಶಾಲಿ. ಅವರಲ್ಲಿ ಗಂಗರಾಜನು ಎಲ್ಲರಿಗಿಂತ ಮಿಗಿಲಾದವನು.[7] ಇವನು ಪ್ರಾಚೀನ ಗಂಗ ಕುಟುಂಬದ ವಂಶಸ್ಥ. ಹೊಯ್ಸಳರಿಗೆ ಅತ್ಯಂತ ಉಪಯುಕ್ತ ಸೇವೆ ಸಲ್ಲಿಸಿದ ಮತ್ತೊಂದು ನಿಷ್ಠಾವಂತ ಕುಟುಂಬವೆಂದರೆ 'ಮರಿಯಾನೆ' ಕುಟುಂಬ. ಈ ಕುಟುಂಬವು ಗಂಗರಾಜನ ಕುಟುಂಬದೊಡನೆ ಹಾಸುಹೊಕ್ಕಾಗಿತ್ತು. ಮರಿಯಾನೆ ದಂಡನಾಯಕ ಮತ್ತವನ ಸಹೋದರ ಭರತ ಇಬ್ಬರು ಪ್ರಸಿದ್ಧ ಸೇನಾನಿಗಳು.

ವಿಷ್ಣುವರ್ಧನನ ಮತ್ತೊಬ್ಬ ಪ್ರಸಿದ್ಧ ಸೈನ್ಯಾಧಿಕಾರಿ, ಪುನಿಸಮಯ ಅಥವಾ ಹುನಿಸಮಯ ನಾಗಿದ್ದನು. ಅವನು ನೀಲಗಿರಿಯನ್ನು ಗೆದ್ದ ವಿಜಯಶಾಲಿ.

ಬಿಟ್ಟಿಮಯ್ಯ, ಕಾಯನ, ದಂಡನಾಥ, ಕೊನೆಯ ಸಂಖಾರ ದಂಡನಾಥ ಇನ್ನಿತರ ಮುಖ್ಯ ಸೇನಾನಿಗಳಾಗಿದ್ದರು.

ಅವನು ಲಲಿತಕಲೆಗಳಲ್ಲಿ, ನೃತ್ಯ ಮತ್ತು ಸಂಗೀತದಲ್ಲಿ ಪರಿಪಕ್ವನಾಗಿದ್ದನು. ಅವನ ಪರಾಕ್ರಮದ ದೃಷ್ಟಿಯಲ್ಲಿ ಅವನನ್ನು ಹನ್ನೊಂದನೇ ಅವತಾರವೆಂದೆನ್ನುತ್ತಿದ್ದರು. ರಜಪುತಾಣ ಅರಸರಾದ ಸಮವೀರರ ಪರಾಕ್ರಮಕ್ಕೆ ಸಮನೆಂದು ಭಾವಿಸಲಾಗಿತ್ತು. ಕಲಿಯುಗದಲ್ಲಿ ಅನ್ಯಾಯವನ್ನು ಅಳಿಸಿ ಹಾಕಲು ದುಷ್ಟರನ್ನು ಮೂಲೋಚ್ಚಾಟನೆ ಮಾಡಲು ಇವನು ಹುಟ್ಟಿರುವನೆಂದು ಹೇಳಲಾಗುತ್ತಿತ್ತು.

## 2.2 ಆರ್ಥಿಕ ಪರಿಸ್ಥಿತಿ

ಜನಸಂಖ್ಯೆಯ ಬಹುಸಂಖ್ಯಾತರು ಗ್ರಾಮಗಳಲ್ಲಿ ವಾಸಿಸುತ್ತಿದ್ದರು ಮತ್ತು ವ್ಯವಸಾಯವೇ ಅವರ ಮುಖ್ಯ ಕಸುಬಾಗಿತ್ತು. ಭೂಮಿಯ ಒಡೆತನವು ಹೆಚ್ಚಿನ ಗೌರವದ

ವಿಷಯವಾಗಿತ್ತು ಮತ್ತು ಪ್ರತಿಯೊಬ್ಬರೂ ವೃತ್ತಿ ಏನೇ ಇರಲಿ, ತನ್ನದೇ ಸ್ವಂತದ್ದೆಂದು ಹೇಳಿಕೊಳ್ಳಲು ಚೂರು ಭೂಮಿಯನ್ನಾದರೂ ಹೊಂದುವ ಗುರಿ ಇಟ್ಟುಕೊಂಡಿದ್ದರು. ಹೀಗೆ ಹಳ್ಳಿಗಳು ಪ್ರಾಥಮಿಕವಾಗಿ ಕೃಷಿಕರ ನಿವಾಸವಾಗಿತ್ತು. ಈ ಕಾಲದಲ್ಲಿ ಭೂಮಿಯು ಆರ್ಥಿಕ ವಲಯದ ಪ್ರಧಾನ ಆಧಾರವೇ ಆಗಿತ್ತು. ಹೀಗೆ ಬಹುತೇಕ ಜನರು ಕೃಷಿಕರಾಗಿದ್ದರು ರಾಜ್ಯದ ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆಗಳೆಲ್ಲವೂ ಭೂಮಿಯನ್ನೇ ಅವಲಂಬಿಸಿದ್ದುವು. ವಾಸ್ತವವಾಗಿ ಜನರು ಆದಾಯಕ್ಕಾಗಿ ಬೇರೆ ಯಾವುದೇ ಮೂಲಕ್ಕಿಂತಲೂ ಭೂಮಿಯ ಮೇಲೆ ಹೆಚ್ಚು ಅವಲಂಬಿತರಾಗಿದ್ದರು. ಹೀಗೆ ಈ ಕಾಲದಲ್ಲಿ ಭೂಮಿಯು ಜನರ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಪ್ರಧಾನ ಪಾತ್ರ ವಹಿಸಿತ್ತು.

ಹೊಯ್ಸಳರು ಸುಸಂಘಟಿತ ಸರ್ಕಾರವನ್ನು ಸ್ಥಾಪಿಸಿದ್ದರು ಮತ್ತು ಆ ಕಾಲದ ಶಿಲಾ ಶಾಸನಗಳು ಹೇಳುವಂತೆ ಅವರು ತಮ್ಮ ಹಣಕಾಸಿಗಾಗಿ ಪ್ರಮುಖವಾಗಿ ಭೂಮಿಯಿಂದ ಬರುವ ಆದಾಯವನ್ನೇ ಅವಲಂಬಿಸಿದ್ದರು. ಈ ಕಾಲದಲ್ಲಿ ಭೂಕಂದಾಯದ ಆಡಳಿತವು ಎರಡು ಹಂತಗಳ ನ್ನೊಳಗೊಂಡಿತ್ತು. ಬೆಲೆ ನಿಗದಿಪಡಿಸುವುದು ಮತ್ತು ವಾಸ್ತವಿಕ ಸಂಗ್ರಹ. ಕೃಷಿಯೋಗ್ಯ ಜಮೀನನ್ನು ಗದ್ದೆ ಅಥವಾ ಹೊಲ ಮತ್ತು ತೋಟ ಎಂದು ವಿಭಾಗಿಸಲ್ಪಟ್ಟಿತ್ತು. ಭತ್ತ ಮತ್ತು ಕಬ್ಬನ್ನು ಗದ್ದೆಯಲ್ಲಿ ಬೆಳೆಯುತ್ತಿದ್ದರು. ಒಣ ಬೆಳೆಗಳನ್ನು ಹೊಲಗಳಲ್ಲಿ ಬೆಳೆಯುತ್ತಿದ್ದರು. ಹಣ್ಣು, ಹೂವು ಮತ್ತು ತರಕಾರಿಗಳನ್ನು ತೋಟಗಳಲ್ಲಿ ಬೆಳೆಯುತ್ತಿದ್ದರು ಮತ್ತು ಭೂಮಿಯನ್ನು ಕಪ್ಪು ಮಣ್ಣು, ಕೆಂಪುಮಣ್ಣು, ಉಪ್ಪಿನಮಣ್ಣು ಮತ್ತು ಜಲ್ಲಿಮಣ್ಣು ಹೀಗೆ ಮಣ್ಣಿನ ಆಧಾರದ ಮೇಲೆ ವಿಭಾಗಿಸಲಾಗುತ್ತಿತ್ತು. ಭೂಕಂದಾಯವನ್ನು ಕೃಷಿ ಭೂಮಿಯ ಉತ್ಪಾದಕ ಶಕ್ತಿಯನ್ನು ಗಣನೆಗೆ ತೆಗೆದುಕೊಂಡು ನಂತರ ನಿಗದಿ ಮಾಡಲಾಗುತ್ತಿತ್ತು.

ಎರಡನೆಯ ಮುಖ್ಯ ತತ್ವವೆಂದರೆ ರೈತರಿಗೆ ಕಂದಾಯ ನಿಗದಿ ಮಾಡುವ ಮೊದಲು ಭೂಮಿಯ ಸಮೀಕ್ಷೆ ಮಾಡಿ, ಅಳೆದ ನಂತರ ನಿರ್ಧಾರ ಮಾಡಲಾಗುತ್ತಿತ್ತು. ಜಮೀನನ್ನು ಅಳೆಯಲು ವಿವಿಧ ಉದ್ದಗಳ ಅನೇಕ ಕೋಲುಗಳನ್ನು ಬಳಸಲಾಗುತ್ತಿತ್ತು. ಅನೇಕ ಘಟಕಗಳು, ವಸ್ತುಗಳು, ಕಂಬ, ಸಲಗೆ, ಗುಳಿ ಇವುಗಳನ್ನು ಭೂಮಿಯನ್ನು ಅಳೆಯಲು ಬಳಸಲಾಗುತ್ತಿತ್ತು. ಕಂದಾಯ ನಿಗದಿಗಾಗಿ ಎಲ್ಲೆಗಳನ್ನು ಗುರುತು ಹಾಕಲಾಗುತ್ತಿತ್ತು.

ಭೂಕಂದಾಯವನ್ನು ನಗದು ಅಥವಾ ಬೇರೆ ರೀತಿಯಲ್ಲಿ ಎರಡು ವಿಧದಲ್ಲೂ ಸಂಗ್ರಹಿಸ ಲಾಗುತ್ತಿತ್ತು. ಭೂಕಂದಾಯವಲ್ಲದೆ ಕಟ್ಟೆ, ಕಾಲುವೆ, ಕೆರೆ ಮತ್ತು ನೀರ್‌ಕುಳಿ, ನದಿತೆರಿಗೆ ಇವುಗಳನ್ನೂ ರೈತನು ಸಲ್ಲಿಸಬೇಕಾಗುತ್ತಿತ್ತು. ಹೊಯ್ಸಳರಸರು, ನೀರಾವರಿ ಯೋಜನೆಗಳ ನಿರ್ಮಾಣ ಮತ್ತು ನಿರ್ವಹಣೆಗಳ ಬಗ್ಗೆ ಆದ್ಯ ಗಮನ ಕೊಡುತ್ತಿದ್ದರು. ಕೆರೆ ಕಟ್ಟಿಸುವುದು ಒಂದು ಛತ್ರ ಮತ್ತು ಜಲಾಶಯ ಮತ್ತು ಅಗ್ರಹಾರಗಳ ಸೃಷ್ಟಿ ಇವುಗಳನ್ನು

ಧಾರ್ಮಿಕ ಕಾರ್ಯಗಳೆಂದೇ ಭಾವಿಸಲಾಗಿತ್ತು. ಉಂಬಳಿ, ಕೆರೆಕೊಡಿಗೆ, ಕಟ್ಟುಕೊಡಿಗೆ ಮತ್ತು ಬಿಟ್ಟುವತ್ತ[4] ಮೊದಲಾದ ಸಹಾಯ ಧನಗಳು ವಿಶೇಷವಾಗಿ ಕೆರೆಗಳನ್ನು ಕಟ್ಟಿದ ಮತ್ತು ನೀರಾವರಿ ಯೋಜನೆಗಳನ್ನು ನಿರ್ವಹಿಸಿದ ವ್ಯಕ್ತಿಗಳಿಗೆ ಕೊಡಲಾಗುತ್ತಿತ್ತು. ಇದರ ನಿರ್ವಹಣೆಗಾಗಿ ಹಣಕಾಸಿನ ಮೂಲಗಳು ಆಗಾಗ್ಗೆ ಬರುತ್ತಿದ್ದುದು ದಾನ, ದೇವಾಲಯದ ಕಾಣಿಕೆಗಳು, ರಾಜ್ಯದ ಸಹಾಯ ಮತ್ತು ನೀರಿನ ತೆರಿಗೆಯ ರೂಪದಲ್ಲಿ ನೀರಾವರಿ ಕಾರ್ಯಗಳಿಂದ ಬರುತ್ತಿದ್ದ ಆದಾಯ ಇವು ಆದಾಯದ ಮೂಲಗಳಾಗಿದ್ದವು. ನೀರಿನ ಹಂಚಿಕೆಗೆ ಸಾಕಷ್ಟು ಗಮನ ಕೊಡಲಾಗಿತ್ತು.

ರಾಜನು ಯಾರಿಗಾದರೂ, ಭೂಮಿಯನ್ನು ದಾನ ಮಾಡಬೇಕಿದ್ದರೂ, ಅದಾಗಲೇ ಖಾಸಗಿ ಒಡೆತನದಲ್ಲಿದ್ದ ಭೂಮಿಯನ್ನು ಕೊಂಡುಕೊಳ್ಳಬೇಕಾಗಿತ್ತು. ಹೀಗೆಂದು ರಾಜರಿಗೆ ತಮ್ಮದೇ ಆದ ಸ್ವಂತ ಭೂಮಿ ಇರಲಿಲ್ಲವೆಂದೇನೂ ಅರ್ಥವಲ್ಲ. ಶಾಸನಗಳಲ್ಲಿ ರಾಜರು ಮತ್ತು ರಾಜ್ಯಪಾಲರು ಎಷ್ಟೋ ಭೂಮಿಯನ್ನು ಮತ್ತು ಹಳ್ಳಿಗಳನ್ನೂ ದಾನವಾಗಿ ಕೊಡುತ್ತಿದ್ದ ಉದಾಹರಣೆಗಳಿವೆ.

ಕೇಂದ್ರ ಭೂಮಿಯ ರಿಜಿಸ್ಟರ್ ಒಂದು ಕಡಿತ ಎಂಬ ಹೆಸರಿನಲ್ಲಿ ಅಸ್ಥಿತ್ವದಲ್ಲಿತ್ತು. ಭೂಕಂದಾಯವನ್ನು 'ಸಿದ್ಧಾಯ' ಎಂದು ಕರೆಯಲಾಗುತ್ತಿತ್ತು. ಇದು ಕುಲ ಅಥವಾ ಮೂಲ ತೆರಿಗೆ ಮತ್ತಿತರ ತೆರಿಗೆಗಳನ್ನೊಳಗೊಂಡಿತ್ತು. ವೃತ್ತಿ ತೆರಿಗೆಗಳನ್ನೂ ಸಹ ವಿಧಿಸಲಾಗುತ್ತಿತ್ತು. ಮದುವೆಯ ತೆರಿಗೆ ಸರಕುಗಳ ಮೇಲೆ. ಉದಾ ರಥಗಳು, ಗಾಡಿಗಳು, ಸಾಕು ಪ್ರಾಣಿಗಳು, ವೀಳ್ಯದೆಲೆ, ತುಪ್ಪ, ದಾರ ಇವುಗಳ ಮೇಲೆ ಸುಂಕ ವಿಧಿಸಲಾಗುತ್ತಿತ್ತು. ಅಲೆ ಮನೆಗಳು ಅಂಗಡಿಗಳು, ಕಬ್ಬು, ಮುದ್ರಣ ಇವುಗಳೂ ತೆರಿಗೆಗೆ ಒಳಪಡುತ್ತಿದ್ದವು. ದಂಡವು ರಾಜನ ವರಮಾನದ ಬಹುದೊಡ್ಡ ಮೂಲವಾಗಿತ್ತು.

ಶಿಲಾಶಾಸನಗಳ ಮತ್ತು ಸಾಹಿತ್ಯಿಕ ಮೂಲಗಳ ಸಮೀಕ್ಷೆಯ ಪ್ರಕಾರ ಆ ಕಾಲದಲ್ಲಿ ಜನರು ಕಲೆಗಳಲ್ಲಿ ಅಥವಾ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಹೆಚ್ಚು ಮುಂದುವರೆದಿದ್ದರು ಮತ್ತು ಲೋಹದ ಕೈಗಾರಿಕೆ, ಹತ್ತಿಗಿರಣಿಗಳು, ಎಣ್ಣೆ ಉತ್ಪಾದನೆ ಹೀಗೆ ನಾನಾ ವಿಧವಾದ ಕೈಗಾರಿಕೆಗಳಿದ್ದವು. ನಾನಾ ವಿಧದ ವಸ್ತುಗಳನ್ನು ಉತ್ಪಾದಿಸುವುದರಲ್ಲಿ ನಿರತರಾದ ಕುಶಲಕರ್ಮಿಗಳು ಸಾಮಾನ್ಯವಾಗಿ ತಮ್ಮದೇ ಆದ ಸಂಘಗಳನ್ನು ಹೊಂದಿದ್ದರು. ನೇಯ್ಗೆಯವರು ಲೋಹದ ಕೆಲಸಗಾರರು, ಚಮ್ಮಾರರು, ಕಲ್ಲುಕುಟುಕರು ಮೊದಲಾದವರು ತಮ್ಮದೇ ಆದ ಸಂಘಗಳನ್ನು ಹೊಂದಿದ್ದರು.

ಸಾಮಾನ್ಯ ಲೋಹಗಳ ಕೈಗಾರಿಕೆಯು ಪರಿಪೂರ್ಣತೆಯ ಉನ್ನತ ಸ್ಥಿತಿಯನ್ನು ತಲುಪಿತ್ತು. ಯುದ್ಧದಲ್ಲಿ ಬಳಸುತ್ತಿದ್ದ ಆಯುಧಗಳು ಸಾಮಾನ್ಯವಾಗಿ ಕಬ್ಬಿಣ ಮತ್ತು

ಉಕ್ಕಿನಿಂದಲೇ ಮಾಡಲ್ಪಟ್ಟಿದ್ದುವು. ಖಡ್ಗಗಳು, ಗುರಾಣಿಗಳು, ಬಿಲ್ಲು ಮತ್ತು ಬಾಣಗಳು ಚಾಕು ಇವೇ ಮೊದಲಾದ ಆಯುಧಗಳು ಮುಖ್ಯವಾಗಿದ್ದವು.

ಹೊಯ್ಸಳರ ನಾಯಕತ್ವದ ಕಾಲವು ಹೆಚ್ಚಿನ ವಾಣಿಜ್ಯ ಚಟುವಟಿಕೆಯ ಕಾಲವಾಗಿತ್ತು. ವ್ಯಾಪಾರವು ಮುಖ್ಯವಾದ ವರ್ತಕರ ಸಂಘಗಳ ಹಿಡಿತದಲ್ಲಿತ್ತು. ಎಲ್ಲಾ ಮುಖ್ಯ ವಾಣಿಜ್ಯ ಚಟುವಟಿಕೆಗಳು, ಪಟ್ಟಣಕ್ಕೆ ಸಂಬಂಧಪಟ್ಟಂತೆ, ಪಟ್ಟಣಸ್ವಾಮಿಯ ಗಮನಕ್ಕೆ ತಂದ ನಂತರವೇ ಮುಂದುವರೆಯಬೇಕಾಗಿತ್ತು.

ದಕ್ಷಿಣ ಭಾರತವು ಪಾಶ್ಚಿಮಾತ್ಯ ದೇಶಗಳೊಡನೆ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿತ್ತು. ಮಲಬಾರ್ ತೀರದ ಮೂಲಕ, ಮೆಣಸು ಮತ್ತು ಶುಂಠಿಯಲ್ಲದೆ, ಸಾಂಬಾರ ಪದಾರ್ಥಗಳು, ಭತ್ತ, ಸಕ್ಕರೆ, ತೆಂಗು, ಹತ್ತಿಬಟ್ಟೆ, ಶ್ರೀಗಂಧ ಇವುಗಳೂ ರಫ್ತಾಗುತ್ತಿದ್ದವು. ಆಮದುಗಳು ಲೋಹಗಳು, ಕುದುರೆಗಳು, ಅಮೂಲ್ಯ ಆಭರಣಗಳು ಇವೇ ಮೊದಲಾದ ವಿವಿಧ ಶ್ರೇಣಿಯ ಸರಕುಗಳನ್ನೊಳಗೊಂಡಿದ್ದವು. ರೇಷ್ಮೆಯ ಚೀನಾದಿಂದ ಆಮದಾಗುತ್ತಿತ್ತು. ಹೊಯ್ಸಳ ಸಾಮ್ರಾಜ್ಯವು ಭೂಮಿ ಯಿಂದಲೇ ಸುತ್ತುವರೆದಿದ್ದುದರಿಂದ, ಭೂ ವ್ಯಾಪಾರವನ್ನು ನಡೆಸಿಕೊಂಡು ಹೋಗಲು ಹೆಚ್ಚಿನ ಅವಕಾಶವಿದ್ದಿತು.

ತನ್ನದೇ ಆದ ಸ್ವಂತ ನಾಣ್ಯವನ್ನು ಹೊರಡಿಸಿದ ಅರಸರಲ್ಲಿ ವಿಷ್ಣುವರ್ಧನನು ಮೊದಲಿಗನು. ಮೂರು ವಿವಿದ ನಾಣ್ಯಗಳನ್ನು ಅವನು ಹೊರಡಿಸಿರುವಂತೆ ತೋರುತ್ತದೆ. ಅವುಗಳಲ್ಲಿ ಒಂದರ ಹಿಂಭಾಗದಲ್ಲಿ ಪುರಾಣದ 'ಮಲೆಪರೋಲ್ ಗಂಡ'ನ ಚಿತ್ರವಿದೆ. (ಗುಡ್ಡದ ಮುಖ್ಯಸ್ಥರ ಒಡೆಯ) ಉಳಿದೆರಡು ನಾಣ್ಯಗಳಲ್ಲಿ ಪ್ರತಿಯೊಂದೂ ಪುರಾಣವನ್ನು ಮೂರು ಸಾಲುಗಳಲ್ಲಿ ಕ್ರಮವಾಗಿ 'ನೊಳಂಬ ವಾಡಿಗೊಂಡ' ಮತ್ತು 'ತಲಕಾಡುಗೊಂಡ' ಎಂದು ನಮೂದಿಸಲ್ಪಟ್ಟಿವೆ. (ತಲಕಾಡು ವಶವಾದದ್ದು) ನಾಣ್ಯದ ಮೇಲ್ಮುಖದಲ್ಲಿ, ಬಲಗಡೆ ಮುಖ ಮಾಡಿರುವ ಒಂದು ಶಾರ್ದೂಲದ ಚಿತ್ರವಿದೆ. (ಪೌರಾಣಿಕ ಹುಲಿ) ಅಲ್ಲದೆ ಮೇಲ್ಗಡೆ ಒಂದು ಸಣ್ಣ ಶಾರ್ದೂಲವೂ ಅದರ ಅಕ್ಕಪಕ್ಕ ಸೂರ್ಯ, ಚಂದ್ರರಿದ್ದಾರೆ. ಒಂದು ಆನೆಯೂ ಇದೆ ಅಥವಾ ಅದೊಂದು ದೀಪಸ್ಥಂಭವೂ ಇರಬಹುದು ದೊಡ್ಡ ಹುಲಿಯ ಎದುರಿನಲ್ಲಿದೆ.

ಹೀಗೆ, ಹಳ್ಳಿಯು ಆಡಳಿತದ ಮತ್ತು ಆರ್ಥಿಕತೆಯ ಬೆನ್ನೆಲುಬಾದ್ದರಿಂದ ಜಮೀನನ್ನು ಅದರ ಫಲವತ್ತತೆ ಮತ್ತು ಮಣ್ಣಿನ ಫಸಲಿನ ಆಧಾರದ ಮೇಲೆ ವಿಭಾಗಿಸಲಾಗುತ್ತಿತ್ತು. ಭೂಕಂದಾಯ ವನ್ನು ಸಂಗ್ರಹಿಸುವ ಸಲುವಾಗಿ ಸರಿಯಾದ ಮೊತ್ತವನ್ನು ನಿಗದಿ ಮಾಡಲು ಜಮೀನಿನ ಸಮೀಕ್ಷೆ ನಡೆಸಲಾಗುತ್ತಿತ್ತು. ಕೃಷಿಯನ್ನು ಅಭಿವೃದ್ಧಿ ಪಡಿಸಲು ಹೊಯ್ಸಳರು ಬಾವಿಗಳನ್ನು ತೋಡಿಸುವುದು, ಕೆರೆಕಾಲುವೆಗಳನ್ನು ಕಟ್ಟಿಸುವುದು. ಇವೇ ಮೊದಲಾದ

ನೀರಾವರಿ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದರು. ಕುಶಲಕರ್ಮಿಗಳ ಸಂಘದ ಪದ್ಧತಿಯು ದಕ್ಷತೆಯಿಂದ ಕೆಲಸ ನಿರ್ವಹಿಸುತ್ತಿತ್ತು ಮತ್ತು ಅವು ವ್ಯಾಪಾರ ಮತ್ತು ಕೈಗಾರಿಕೆ ಎರಡಕ್ಕೂ ಬಹಳ ಸಹಾಯಕಾರಿ ಆಗಿದ್ದುವು. ಒಟ್ಟಿನಲ್ಲಿ ಆರ್ಥಿಕ ಪರಿಸ್ಥಿತಿಯು ತೃಪ್ತಿಕರವಾಗಿದ್ದಂತೆ ತೋರುವುದು ಮತ್ತು ರಾಜ್ಯವು ವ್ಯವಸಾಯ, ವ್ಯಾಪಾರ ಮತ್ತು ವಾಣಿಜ್ಯವನ್ನು ಪ್ರೋತ್ಸಾಹಿಸಲು ಬಹಳ ಆಸಕ್ತಿ ವಹಿಸಿತ್ತು. ಸಮಾಜದ ಶ್ರೀಮಂತ ವರ್ಗವು ಪಟ್ಟಣಗಳಲ್ಲಿ ಮತ್ತು ನಗರಗಳಲ್ಲಿ ವಾಸಿಸುತ್ತಿತ್ತು. ಸಾಮಾನ್ಯ ರೈತವರ್ಗದವರು ಹೆಚ್ಚಿನವರಿದ್ದು ಬಹಳ ಶ್ರಮಜೀವಿಗಳಾಗಿದ್ದರು. ವಸ್ತು ವಿನಿಮಯ ಮತ್ತು ಹಣದ ಅರ್ಥವ್ಯವಸ್ಥೆ ಎರಡೂ ಒಟ್ಟೊಟ್ಟಿಗೆ ಜಾರಿಯಲ್ಲಿದ್ದವು.

## 2.3 ಸಾಮಾಜಿಕ ಪರಿಸ್ಥಿತಿ

ಶಿಲಾಶಾಸನಗಳು ಮತ್ತು ದೇವಾಲಯದಲ್ಲಿನ ಶಿಲ್ಪಗಳು ಹೊಯ್ಸಳರ ಕಾಲದ ಸಾಮಾಜಿಕ ಜೀವನದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತವೆ.

### (ಅ) ಜಾತಿ ಪದ್ಧತಿ

ಜಾತಿ ಪದ್ಧತಿಯು ಸಮಾಜದ ಸ್ಪಷ್ಟ ಲಕ್ಷಣವಾಗಿತ್ತು. ಬ್ರಾಹ್ಮಣರು ಸಮಾಜದಲ್ಲಿ ಉನ್ನತ ಸ್ಥಾನ ಪಡೆದಿದ್ದರು. ಅರ್ಚಕ ವೃತ್ತಿ ಮತ್ತು ಸಾಹಿತ್ಯಿಕ ಚಟುವಟಿಕೆಗಳೇ ಅವರ ಮುಖ್ಯ ಕರ್ತವ್ಯವಾಗಿತ್ತು. ಬ್ರಾಹ್ಮಣರು ವೇದಗಳನ್ನು ಕಲಿಯುವುದರಲ್ಲಿ ಮತ್ತು ಬೋಧಿಸುವುದರಲ್ಲಿ ಅಲ್ಲದೆ ಪುರಾಣಗಳು, ಶಾಸ್ತ್ರಗಳು, ತರ್ಕಶಾಸ್ತ್ರ, ಆಗಮಗಳು, ಸ್ಮೃತಿಗಳು ಮತ್ತು ಬಲಿದಾನಗಳಲ್ಲಿ ಅವುಗಳಲ್ಲಿ ಅರ್ಥೈಸುವುದರಲ್ಲಿ ಅಗ್ರಗಣ್ಯರಾಗಿದ್ದರು. ವೇದಪಠನಕ್ಕಾಗಿ ಬ್ರಾಹ್ಮಣರಿಗೆ ಧನಸಹಾಯ ನೀಡಲಾಗುತ್ತಿತ್ತು. ಬ್ರಾಹ್ಮಣರಿಗೆ ಉಣಬಡಿಸಲು ಹಣಸಂದಾಯ ನೀಡಲಾಗುತ್ತಿತ್ತು. ಆಧ್ಯಾತ್ಮಿಕ ಮತ್ತು ಬೌದ್ಧಿಕ ಪ್ರತಿಭೆಯಿಂದಲೇ ಬ್ರಾಹ್ಮಣರು ಸಮಾಜದ ಗೌರವಕ್ಕೆ ಪಾತ್ರರಾಗಿದ್ದರು.

ಬ್ರಾಹ್ಮಣರ ನಂತರ ಕ್ಷತ್ರಿಯರು ಸಮಾಜದಲ್ಲಿ ಗಣ್ಯ ಸ್ಥಾನವನ್ನು ಪಡೆದಿದ್ದರು. ಇವರು ಸಾಮಾನ್ಯವಾಗಿ ರಾಜನ ಸಂಬಂಧಿಕರು ಮತ್ತು ಗಣ್ಯವ್ಯಕ್ತಿಗಳಾಗಿದ್ದರು ಮತ್ತು ಧರ್ಮದ ತತ್ವಗಳನ್ನು ಎತ್ತಿ ಹಿಡಿಯುತ್ತಿದ್ದರು. ಜಾತಿ ಪದ್ಧತಿಯಲ್ಲಿ ನಂತರ ಬಂದವರು ವೈಶ್ಯರು. ಇವರ ಮುಖ್ಯ ಉದ್ಯೋಗ, ವ್ಯಾಪಾರ, ವಾಣಿಜ್ಯ ಮತ್ತು ಬೇಸಾಯವಾಗಿತ್ತು. ಅವರ ವೃತ್ತಿಯಿಂದ ವರ್ತಕರು ಅಥವಾ ಶೆಟ್ಟಿಗಳು ಸಮಾಜದಲ್ಲಿ ಅತ್ಯಂತ ಶ್ರೀಮಂತ ವರ್ಗವಾಗಿ ಬೆಳೆದರು. ಅವರು ತಮ್ಮಲ್ಲಿ ಅನೇಕ ವೃತ್ತಿಸಂಘಗಳನ್ನು ಸಂಘಟಿಸಿದ್ದರು.

ಜಾತಿ ಪದ್ಧತಿಯಲ್ಲಿ ಶೂದ್ರರು ಕೊನೆಯ ಸ್ಥಾನವನ್ನು ಪಡೆದಿದ್ದರು. ಜನಸಂಖ್ಯೆಯಲ್ಲಿ ಬಹುಪಾಲು ಇವರೇ ಆಗಿದ್ದರು.

**(ಬಿ) ಕುಟುಂಬ**

ಮಧ್ಯಕಾಲೀನ ಯುಗದಲ್ಲಿ ಒಟ್ಟು ಕುಟುಂಬವು ಅತ್ಯಂತ ಜನಪ್ರಿಯ ಸಂಸ್ಥೆಯಾಗಿತ್ತು. ತಂದೆಯು ಕುಟುಂಬದ ಯಜಮಾನನಾಗಿದ್ದನು. ತನ್ನ ಸದಸ್ಯರ ನಡತೆ ಮತ್ತು ಸಂಸ್ಕೃತಿಯನ್ನು ತಿದ್ದುವುದರಲ್ಲಿ ಕುಟುಂಬವು ಮಹತ್ತರ ಪಾತ್ರವನ್ನು ವಹಿಸಿತ್ತು.

**(ಸಿ) ಆಹಾರ**

ಅಕ್ಕಿಯು ಜನರ ಮುಖ್ಯ ಆಹಾರ ಬೆಳೆಯಾಗಿತ್ತು. ಅಕ್ಕಿಯಲ್ಲದೆ ಅನೇಕ ರೀತಿಯ ಕಾಳುಗಳನ್ನೂ ಬಳಸಲಾಗುತ್ತಿತ್ತು. ಶಿಲಾಶಾಸನಗಳಲ್ಲಿ ತಿಳಿಸಿರುವಂತೆ ಗೋಧಿ, ಜೋಳ, ರಾಗಿ, ಮುಂತಾದವು ಇತರ ಧಾನ್ಯಗಳಾಗಿದ್ದುವು. ಅಲ್ಲದೆ ಇನ್ನೂ ಅನೇಕ ರೀತಿಯ ಬೆಳೆಗಳನ್ನು ಬೆಳೆಯುತ್ತಿದ್ದರೆಂಬುದಕ್ಕೆ ನಮಗೆ ಉಲ್ಲೇಖಗಳು ದೊರೆಯುತ್ತವೆ. ಉದಾ: ಉದ್ದಿನಬೇಳೆ, ಹುರುಳಿ, ಮೆಣಸು, ಅರಿಶಿನ, ಏಲಕ್ಕಿ, ಶುಂಠಿ ಮೊದಲಾದವುಗಳನ್ನೂ ಸಹ ಜನರು ಬಳಸುತ್ತಿದ್ದರು.

ಹಣ್ಣುಗಳಲ್ಲಿ ಮಾವಿನಹಣ್ಣು, ಬಾಳೆಯಹಣ್ಣು, ಹಲಸಿನಹಣ್ಣು, ನಿಂಬೆ, ಕಿತ್ತಳೆ, ದ್ರಾಕ್ಷಿ ಮೊದಲಾದ ಹೆಸರುಗಳು ಶಿಲಾಲಿಪಿಗಳಲ್ಲಿ ಕಂಡುಬರುತ್ತವೆ. ಬದನೆ, ಸೌತೆಕಾಯಿ, ಕುಂಬಳ ಮೊದಲಾದ ತರಕಾರಿಗಳ ಪರಿಚಯ ಜನರಿಗಿತ್ತು. ಹಾಲು ಮತ್ತು ಅದರ ಅನೇಕ ಉತ್ಪಾದನೆಗಳಾದ ತುಪ್ಪ ಮತ್ತು ಬೆಣ್ಣೆ ಜನಪ್ರಿಯವಾಗಿ ಎಲ್ಲಾ ಜನರಿಂದಲೂ ಬಳಸಲ್ಪಡುತ್ತಿದ್ದವು. ಬಟ್ಟಲುಗಳು, ಬೇಸಿನ್, ಮಡಕೆ, ಹೂದಾನಿ, ಮೂತಿ ಚಾಚಿರುವ ಪಾತ್ರೆಗಳು, ಜಗ್‌ಗಳು, ಪಾತ್ರೆಗಳು ಇವು ಈ ಕಾಲದ ಜನರು ಗೃಹಕೃತ್ಯದಲ್ಲಿ ಬಳಸುತ್ತಿದ್ದ ಪಾತ್ರೆಗಳಾಗಿದ್ದವು.

**(ಡಿ) ಉಡುಗೆ**

ಈ ಕಾಲದಲ್ಲಿ ಅನೇಕ ವಿಧದ ಉಡುಗೆಗಳನ್ನು ಜನರು ಧರಿಸುತ್ತಿದ್ದರು. ವಿಧವಿಧದ ಕೆಳ ಮತ್ತು ಮೇಲಣ ಉಡುಪುಗಳನ್ನು ಪುರುಷರು ಸಾಮಾನ್ಯ ಜನರು ಹಾಗೂ ರಾಜಮನೆತನದವರು ಧರಿಸುತ್ತಿದ್ದರು. ಸಾಮಾನ್ಯ ಜನರು ಪಂಚೆಯನ್ನು ಧರಿಸುತ್ತಿದ್ದರು. ಮೇಲುಡುಗೆ ಇರುತ್ತಿರಲಿಲ್ಲ. ಮಂತ್ರಿಗಳು ಟೋಪಿಯನ್ನು ಧರಿಸುತ್ತಿದ್ದರು. ಅದರು ಒಂದು ಪಟ್ಟಿಯಿಂದ ಕೆನ್ನೆಯ ಕೆಳಗಡೆ ಕಟ್ಟಲ್ಪಟ್ಟಿರುತ್ತಿತ್ತು. ಸೈನಿಕರು ಉದ್ದನೆಯ ತೋಳುಗಳ, ಸೊಂಟದಿಂದ ಸ್ವಲ್ಪ ಕೆಳಗಿನವರೆಗಿನ ಅಂಗಿಯನ್ನು ಧರಿಸುತ್ತಿದ್ದರು.

ಸ್ತ್ರೀಯರ ಉಡುಗೆ ಬಗ್ಗೆ ಹೇಳುವುದಾದರೆ ಸೀರೆ ಸಾಮಾನ್ಯವಾಗಿತ್ತು. ಲಂಗವು ನರ್ತಕಿಯರ ಅತ್ಯಂತ ಜನಪ್ರಿಯ ಉಡುಗೆಯಾಗಿತ್ತು. ಈ ಕಾಲದಲ್ಲಿ ನಾನಾ ವಿಧದ ಕೇಶವಿನ್ಯಾಸ ಮತ್ತು ಕೇಶಾಲಂಕಾರಗಳು ಆಚರಣೆಯಲ್ಲಿದ್ದವು.

**(ಇ) ಒಡವೆ ಮತ್ತು ಆಭರಣಗಳು**

ಒಡವೆ ಮತ್ತು ಆಭರಣಗಳು ಶ್ರೀಮಂತರು ಮತ್ತು ಸಾಮಾನ್ಯರು ಬಳಸುತ್ತಿದ್ದ ರೀತಿ ಒಂದೇ ತೆರನಾದರೂ ಅವುಗಳನ್ನು ಮಾಡುತ್ತಿದ್ದ ವಸ್ತುವಿನಲ್ಲಿ ವ್ಯತ್ಯಾಸವಿರುತ್ತಿತ್ತು. ಅನೇಕ ವಿಧವಾದ ಶಿರಸ್ಸಿನ ಆಭರಣಗಳು ಸಾಮಾನ್ಯವಾಗಿ ವರ್ಗೀಕರಿಸಬಹುದು. ಅವು ಮುಕುಟ, ತಿಯೂರ ಮತ್ತು ಜಾತಮುಕುಟ, ಮಕರಕುಂಡಲ, ಸರ್ಪಕುಂಡಲ, ರತ್ನಕುಂಡಲ, ಮಣಿಕುಂಡಲ, ಕಮಲಕುಂಡಲ ಮೊದಲಾದ ಕರ್ಣಾಭರಣಗಳು ರೂಢಿಯಲ್ಲಿದ್ದವು. ಕೊರಳಿನ ಆಭರಣಗಳನ್ನು ಮೂರು ಗುಂಪಿನಲ್ಲಿ ವಿಭಾಗಿಸಬಹುದು. 1) ಕಾಂತಮೂಲ 2) ಎದೆಯ ಮೇಲೆ ತೂಗಿ ಬೀಳುವ ತರ್ಮ್ರುಚಕ ಅಥವಾ ಮಾಲಾ 3) ಉದ್ದನೆಯ ಕೊರಳ ಹಾರ, ಸೊಂಟದ ಆಭರಣದವರೆಗೂ, ಬೇರೆ ಬೇರೆ ಮಾದರಿಗಳೊಡನೆ ತೂಗಿಬೀಳುವ ಮಾಲೆ–ಇವು ರೂಢಿಯಲ್ಲಿದ್ದವು.

**ಕೈ ಆಭರಣಗಳನ್ನು ಮೂರು ರೀತಿಗಳಲ್ಲಿ ವಿಭಾಗಿಸಬಹುದು**

1) ಮೇಲ್ತೋಳಿನ ಆಭರಣಗಳು 2) ಮುಂಗೈನ ಆಭರಣಗಳು 3) ಬಳೆಗಳು ಮತ್ತು ಕಡಗಗಳು, ನೂಪುರಗಳು, ಝುಲ್ ಝುಲ್ ಶಬ್ಧ ಮಾಡುತ್ತ ಸ್ತ್ರೀಯರ ಪಾದಗಳನ್ನು ಅಲಂಕರಿಸುತ್ತಿದ್ದವು ಮತ್ತು ಅತ್ಯಂತ ಬೆಲೆ ಬಾಳುವ ಹರಳುಗಳಿಮದ ಮಾಡಲ್ಪಡುತ್ತಿದ್ದವು. ಈ ಕಾಲದ ಆಭರಣಗಳು, ಮೊದಲಿನ ಕಾಲಕ್ಕಿಂತ ನಯವಾಗಿದ್ದವು ಮತ್ತು ಹೆಚ್ಚು ಆಕರ್ಷಿತವಾಗಿದ್ದವು.

**ಎಫ್) ಕ್ರೀಡೆಗಳು ಮತ್ತು ವಿನೋದಗಳು**

ಪಗಡೆ, ಕೋಲಾಟ, ಅಣ್ಣೇಕಲ್ ಈ ಕಾಲದ ಪ್ರಸಿದ್ಧ ಆಟಗಳಾಗಿದ್ದವು. ಕುಸ್ತಿ ಜನರ ಪ್ರಿಯವಾದ ಮನರಂಜನೆಯ ಸಾಧನವಾಗಿತ್ತು. ಬೇಟೆಯಾಡುವುದು, ರಾಜರ ಹಾಗೂ ಸಾಮಾನ್ಯರ ಕಾಲ ಕಳೆಯುವ ಜನಪ್ರಿಯ ಹವ್ಯಾಸವಾಗಿತ್ತು. ಓಕಳಿಯಾಟ ಪ್ರಸಿದ್ಧ ಕ್ರೀಡೆಯಾಗಿತ್ತು.

**ಜಿ) ಲಲಿತ ಕಲೆಗಳು**

ಈ ಕಾಲದಲ್ಲಿ ಸಂಗೀತ ಮತ್ತು ನೃತ್ಯ ಮೆರೆದವು. ದೇವಾಲಯಗಳ ಶಿಲ್ಪಕಲೆಗಳಲ್ಲಿ ಅನೇಕ ರೀತಿಯ ವಾದ್ಯಗಳನ್ನು ಕಾಣಬಹುದಾಗಿದೆ. ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳು ಸ್ತ್ರೀ, ಪುರುಷರಿಬ್ಬರೂ ಹಾಡುತ್ತ, ನರ್ತಿಸುತ್ತಿರುವ ಚಿತ್ರಗಳನ್ನು ಪ್ರತಿಬಿಂಬಿಸಿವೆ.

**ಹೆಚ್) ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ**

ಸ್ತ್ರೀಯರು ಸಮಾಜದಲ್ಲಿ ಗೌರವಾನ್ವಿತ ಸ್ಥಾನವನ್ನು ಪಡೆದಿದ್ದರು ಮತ್ತು ಅನೇಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ರಾಜಕೀಯ ಕ್ಷೇತ್ರದಲ್ಲಿ ಸ್ತ್ರೀಯರು ಸಕ್ರಿಯ ಪಾತ್ರ ವಹಿಸುತ್ತಿದ್ದರು. ಸ್ತ್ರೀಯರು ಒಳ್ಳೆಯ ಆಡಳಿತಗಾರರಾಗಿದ್ದರು, ರಾಜ್ಯಪಾಲರಾಗಿದ್ದರು ಮತ್ತು ಅವರು ಆರ್ಥಿಕ ಸ್ಥಾನಮಾನ ಹೊಂದಿದ್ದರು. ತಾಯಿಯು ಅತ್ಯಂತ ಹೆಚ್ಚಿನ ಗೌರವಕ್ಕೆ ಪಾತ್ರಳಾಗಿದ್ದಳು. ಧನ ಸಹಾಯ ನೀಡುವಾಗ ಪತಿಯು ತನ್ನ ಪತ್ನಿಯ ಒಪ್ಪಿಗೆಗೆ ಹೆಚ್ಚು ಬೆಲೆ ಕೊಡುವುದು ರೂಢಿ ಯಲ್ಲಿತ್ತು. ಇದು ಪತ್ನಿಯು ತಾನು ಅನುಭವಿಸುತ್ತಿದ್ದ ಸ್ಥಾನದ ಸೂಚನೆಯಾಗಿದೆ.

**ಐ) ವೀರಗಲ್ಲುಗಳು**

ಹೆಚ್ಚು ಕಡಿಮೆ ಎಲ್ಲ ಹಳ್ಳಿಗಳಲ್ಲೂ ವೀರಗಲ್ಲುಗಳು ಕಂಡುಬರುತ್ತವೆ. ಯುದ್ಧ ಭೂಮಿಯಲ್ಲಿ ಪ್ರಾಣಾರ್ಪಣೆ ಮಾಡಿದ ಯೋಧರ ಸ್ಮರಣಾರ್ಥ ಈ ವೀರಗಲ್ಲು ಸ್ಥಾಪಿಸಲ್ಪಟ್ಟಿವೆ.

**ಜೆ) ನಿಸಿದಿಗಳು**

ಧಾರ್ಮಿಕ ಚಿಹ್ನೆಯಾಗಿ ಈ ನಿಸಿದಿಗಳು ಪ್ರಮುಖವಾಗಿವೆ.

**ಕೆ) ಸತಿಗಲ್ಲುಗಳು**

ಈ ಕಾಲದಲ್ಲಿ ಸ್ತ್ರೀಯರು ತಮ್ಮ ಪತಿಗಳ ಚಿತೆಯಲ್ಲಿ ಹಾರಿ ತಮ್ಮನ್ನು ತಾವು ದಹಿಸಿಕೊಳ್ಳುವ ಪದ್ಧತಿಯು ರೂಢಿಯಲ್ಲಿತ್ತು.

**1) ವಿವಾಹ**

ವಿವಾಹವು ಕಡ್ಡಾಯವಾಗಿತ್ತು. ಅಲ್ಬರೂನಿ ಹೇಳುವಂತೆ "ಹಿಂದೂಗಳು ಸಣ್ಣ ವಯಸ್ಸಿನಲ್ಲಿಯೇ ಮದುವೆಯಾಗುತ್ತಾರೆ ಮತ್ತು ಬ್ರಾಹ್ಮಣ ವಧುವಿನ ಮದುವೆಯ ಸಾಮಾನ್ಯ ವಯಸ್ಸು ಹನ್ನೆರಡು ವರುಷಗಳು". ಅವನ ಅಭಿಪ್ರಾಯವನ್ನು ಮುಂದೆ ಶಿಲಾಶಾಸನಗಳೂ ದೃಢೀಕರಿಸುತ್ತವೆ. ರಾಜ ವಿಷ್ಣುವರ್ಧನನು ಬಿಟ್ಟಿಯನ್ನೆಯನ್ನು ಸಾಕಿದನು. ಹದಿನೈದನೆಯ ವಯಸ್ಸಿನಲ್ಲಿ ಆತನು ಕಲಿಕೆಯ ಎಲ್ಲಾ ರೀತಿಗಳಲ್ಲಿಯೂ ಪಾರಂಗತನಾದನು. ರಾಜನು ಆತನ ವಿವಾಹವನ್ನು ಮಂತ್ರಿ ದಂಡನಾಥನ ಮಗಳೊಂದಿಗೆ ನೆರವೇರಿಸಿದನು. ಈ ಕಾಲದಲ್ಲಿ ಬಹುಪತ್ನಿತ್ವ ರೂಡಿಯಲ್ಲಿತ್ತು. ವಿವಾಹ ತೆರಿಗೆ ವಿಧಿಸುವುದು ರೂಡಿಯಲ್ಲಿತ್ತು. ವಿವಾಹವು ಹಿಂದೂಗಳಿಂದ, ಪವಿತ್ರ ಸಂಸ್ಥೆಯೆಂದು ಭಾವಿಸಲಾಗಿದೆ. ಅದು ಓರ್ವ ಪುರುಷ ಮತ್ತು ಸ್ತ್ರೀಯ ಒಪ್ಪಂದ ಮಾತ್ರವಲ್ಲ, ಅದು ಒಂದು ಪವಿತ್ರ ಬಂಧನ. ಮದುವೆಯ ವಿಧಿಗಳಲ್ಲಿ ಸಪ್ತಪದಿ ಅಥವಾ ಏಳು ಹೆಜ್ಜೆಗಳು ಅತ್ಯಂತ ಮುಖ್ಯವಾದ ವಿಧಿ. ಇದು ಪೂರ್ಣಗೊಳ್ಳದೆ

ಮದುವೆಯು ಪೂರ್ಣ ವಾಗುವುದಿಲ್ಲ. ತಮ್ಮ ಪತಿಗಳ ಎದುರು ನಿಧನ ಹೊಂದಿದ ವಿವಾಹಿತ ಸ್ತ್ರೀಯರ ನೆನಪಿಗಾಗಿ ಕಟ್ಟಿದ ಸ್ಮಾರಕ ಶಿಲೆಗಳು ಅವನ ಉನ್ನತ ಗುಣಗಳನ್ನು ಹೊಗಳುತ್ತವೆ. ಶಾಂತಲೆಯು ವಿವೇಚನೆಯಲ್ಲಿ ಬೃಹಸ್ಪತಿಗೆ ಸಮಾನಳೆಂದು ಹೊಗಳಲ್ಪಟ್ಟಿದ್ದಾಳೆ.

ಹೀಗೆ ಈ ಕಾಲದ ಜನರ ಸಾಮಾಜಿಕ ಜೀವನವು ಭಾರತೀಯ ಜೀವನದ ಮುಖ್ಯ ವಾಹಿನಿಗಿಂತ ಭಿನ್ನವಾಗಿ ಏನೂ ಇರಲಿಲ್ಲ. ಅದೇ ಮೌಲ್ಯಗಳು, ಪದ್ಧತಿಗಳು, ರೀತಿನೀತಿಗಳು, ಸಂಪ್ರದಾಯಗಳು, ಆಹಾರ ಪದ್ಧತಿ, ಉಡುಗೆಯ ರೀತಿ, ಕ್ರೀಡೆಗಳು ಮತ್ತು ವಿನೋದಗಳು, ಎಲ್ಲವೂ ಇದಕ್ಕಿಂತ ಮೊದಲಿನ ಅಥವಾ ನಂತರದ ಕಾಲದಲ್ಲಿದ್ದಂತೆಯೇ ರೂಢಿಯಲ್ಲಿದ್ದವು. ಈ ಕಾಲದ ಸಾಂಸ್ಕೃತಿಕ ಸಾಧನೆಗಳು, ಹೆಮ್ಮೆ ಮತ್ತು ಸ್ಫೂರ್ತಿಯ ಮೂಲಗಳಾಗಿ ಕಂಡುಬರುತ್ತವೆ.



## 2.4 ಶಿಕ್ಷಣ ಮತ್ತು ಸಾಹಿತ್ಯ

ಹಿಂದಿನ ದಿನಗಳಲ್ಲಿ ಕೆಲವೇ ವರ್ಗದ ಜನರು ಮಾತ್ರ ಶಿಕ್ಷಣ ಪಡೆಯಲು ಅರ್ಹರಾಗಿದ್ದರು. ಶಿಲಾಶಾಸನಗಳು ಹಾಗೂ ಸಾಹಿತ್ಯಿಕ ಮೂಲಗಳು ತಿಳಿಸುವಂತೆ ಶಿಕ್ಷಣವು ರಾಜಕುಮಾರರಿಗೆ, ಅದರಲ್ಲೂ ಯುವರಾಜರಿಗೆ ಅತ್ಯಂತ ಅಗತ್ಯಗಳಲ್ಲಿ ಒಂದಾಗಿತ್ತು. ಈ ಕಾಲವು ಶಿಕ್ಷಣ ಮತ್ತು ಸಾಹಿತ್ಯದ ಕ್ಷೇತ್ರಗಳಲ್ಲಿ ಒಳ್ಳೆಯ ಕಾಣಿಕೆಯನ್ನು ಕೊಟ್ಟಿದೆ.

ಮುಖ್ಯವಾದ ಕಲಿಕೆಯ ಕೇಂದ್ರಗಳೆಂದರೆ, ದೇವಾಲಯಗಳು, ಬಸದಿಗಳು, ಅಥವಾ ಮಠಗಳು, ಅಗ್ರಹಾರಗಳು, ಘಟಿಕ ಸ್ಥಾನಗಳು ಮತ್ತು ಬ್ರಹ್ಮಪುರಿಗಳು. ಈ ಸಂಸ್ಥೆಗಳಲ್ಲಿ ನೀಡಲಾಗುತ್ತಿದ್ದ ಶಿಕ್ಷಣದ ರೀತಿಯು ಹೆಚ್ಚು ಕಡಿಮೆ ಒಂದೇ ತೆರನಾದರೂ, ಸಂಯೋಜನೆ ಮತ್ತು ಸ್ವಭಾವದಲ್ಲಿ ವ್ಯತ್ಯಾಸವಿರುತ್ತಿತ್ತು. ಇವುಗಳಲ್ಲಿ ಅಗ್ರಹಾರಗಳ ಬಗ್ಗೆ ಹೊಯ್ಸಳ ಅರಸರ ಶಿಲಾ ಶಾಸನಗಳಲ್ಲಿ ಅಲ್ಲಲ್ಲಿ ಬಹಳ ಸಾಮಾನ್ಯವಾಗಿ ತಿಳಿಸಿರುವುದನ್ನು ಕಾಣುತ್ತೇವೆ. ಈ ಅಗ್ರಹಾರಗಳು ಬ್ರಾಹ್ಮಣರಿಗೆ ಅವರ ಜೀವನೋಪಾಯಕ್ಕಾಗಿ ಒಪ್ಪಿಸಲ್ಪಟ್ಟ ಹಳ್ಳಿಗಳಿಂದ ನೇಮಿತವಾಗಿದ್ದವು. ಬ್ರಹ್ಮಪುರಿಗಳು ಒಂದು ಹಳ್ಳಿ ಅಥವಾ ಪಟ್ಟಣದ ಪ್ರದೇಶಗಳಿಂದ ಒಳಗೂಡಿ, ವಿಶೇಷವಾಗಿ, ಬೋಧಕರಿಗೆ ಮಾತ್ರ ಮೀಸಲಾಗಿದ್ದವು ಮತ್ತು ಬೋಧನೆ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಅಗ್ರಹಾರಗಳಿಗಿಂತ ಏನೂ ಭಿನ್ನವಾಗಿರಲಿಲ್ಲ. ಘಟಿಕ ಸ್ಥಾನಗಳು ಒಂದು ಅಥವಾ ಅದಕ್ಕಿಂತ ಹೆಚ್ಚಿನ ಜ್ಞಾನದ ಶಾಖೆಗಳಲ್ಲಿ ಹೆಚ್ಚು ಪರಿಣತಿಯನ್ನು ಕೊಡುವ ಸಂಸ್ಥೆಗಳಾಗಿದ್ದವು. ದೇವಸ್ಥಾನಗಳು ಮತ್ತು ಮಠಗಳು ಸಕ್ರಿಯವಾದ ಧಾರ್ಮಿಕ ಕೇಂದ್ರವಲ್ಲದೆ, ಧಾರ್ಮಿಕತೆಯ ಜೊತೆಗೇ ಶಿಕ್ಷಣವನ್ನು ಕೊಡುತ್ತಿದ್ದವು. ಶಿಕ್ಷಣಕ್ಕಾಗಿ ಧನ ನೀಡುವುದು, ಒಂದು ಧರ್ಮಶ್ರದ್ಧೆಯ ಕೆಲಸವೆಂದು ಭಾವಿಸಲಾಗಿತ್ತು. ರಾಜರು, ರಾಣಿಯರು,

ರಾಜ ಕುಟುಂಬದ ಸದಸ್ಯರು ಮಂತ್ರಿಗಳು ಮತ್ತಿತರ ಅಧಿಕಾರಿಗಳು, ಶಿಕ್ಷಣಕ್ಕಾಗಿ ಎಲ್ಲಾ ನೆರವನ್ನೂ ನೀಡುತ್ತಿದ್ದರು.

ಬ್ರಾಹ್ಮಣರು ಲೌಕಿಕ ಮತ್ತು ಪವಿತ್ರ ಕಲಿಕೆಯಲ್ಲಿ ಪರಿಣಿತರಾಗಿದ್ದರು. ದಾನ ಪಡೆದ ಬ್ರಾಹ್ಮಣರು ತಮ್ಮ ಸಾಂಪ್ರದಾಯಿಕ ಆರು ಬಗೆಯ ಕರ್ತವ್ಯಗಳನ್ನು ನಿರ್ವಹಿಸುವುದಲ್ಲದೆ ಮೀಮಾಂಸೆಯಲ್ಲಿ ತರ್ಕಶಾಸ್ತ್ರದ ಆರು ಪದ್ಧತಿಗಳಲ್ಲೂ ಪರಿಣಿತರೆಂದು ವರ್ಣಿಸಲ್ಪಟ್ಟಿದ್ದಾರೆ. ಅವರು ಪುರಾಣಗಳು, ಸ್ಮೃತಿಗಳು, ಕಾವ್ಯ, ನಾಟಕ, ಮಂಜರಿ ಮೊದಲಾದವುಗಳಲ್ಲಿ ಉತ್ತಮ ತಿಳುವಳಿಕೆ ಯನ್ನು ಪಡೆದಿದ್ದರು. ಮಠಗಳ ಸನ್ಯಾಸಿಗಳು, ವ್ಯಾಕರಣ, ವೇದಗಳು, ಯೋಗಶಾಸ್ತ್ರಗಳು, ಪುರಾಣಗಳು ಕಲಿಕೆಯ ಇತರ ಶಾಖೆಗಳಲ್ಲಿ ನುರಿತವರಾಗಿದ್ದರು. ಅವರ ವಿಶಿಷ್ಟ ವ್ಯಕ್ತಿತ್ವ ಮತ್ತು ಪಾಂಡಿತ್ಯ ಪರಿಶೋಧಗಳಿಂದ ದೇಶದಲ್ಲಿ ಉನ್ನತ ಸ್ಥಾನವನ್ನು ಪಡೆದಿದ್ದರು ಮತ್ತು ಅವರನ್ನು ರಾಜ ಗುರುಗಳೆಂದು ಗೌರವಿಸಲಾಗುತ್ತಿತ್ತು. ಅಧ್ಯಯನದ ಇತರ ವಿಷಯಗಳೆಂದರೆ, ವ್ಯಾಕರಣ, ಯೋಗ, ಧರ್ಮಶಾಸ್ತ್ರಗಳು, ಪುರಾಣಗಳು, ತರ್ಕಶಾಸ್ತ್ರ, ಕವಿತೆ, ಸಂಗೀತ, ಚಿತ್ರಕಲೆ ಮೊದಲಾದವು. ಬೋಧನಾ ಕ್ರಮವು ಸಹಜವಾಗಿ ಬಾಯಿ ಪಾಠವೇ ಇರುತ್ತಿತ್ತು. ವಿದ್ಯಾರ್ಥಿಗಳು ಗುರುಗಳೊಂದಿಗೇ ಇರುತ್ತಿದ್ದರು. ಅಧ್ಯಯನದ ಇಡೀ ಅವಧಿ ಪೂರೈಸುವವರೆಗೂ ವಿದ್ಯಾರ್ಥಿಗಳು ತಮ್ಮ ಬೋಧಕ ರೊಂದಿಗೇ ಇರುತ್ತಿದ್ದರು ಮತ್ತು ಗುರುವಿನ ವ್ಯಕ್ತಿತ್ವದಿಂದ ಬಹಳ ಪ್ರಭಾವಿತರಾಗುತ್ತಿದ್ದರು.

ಸ್ತ್ರೀಯರಿಗೆ ಶಿಕ್ಷಣವು ನಿಷೇಧವಾಗಿರಲಿಲ್ಲ. ಹೊಯ್ಸಳ ರಾಣಿಯರಲ್ಲಿ ಅನೇಕರು ಸುಶಿಕ್ಷಿತ ರಾಗಿದ್ದರು. ಅವರು ಸಂಗೀತ ಮತ್ತು ನೃತ್ಯದಲ್ಲಿ ಪರಿಣಿತರಾಗಿದ್ದರು ಮತ್ತು ಅನೇಕ ವೇಳೆ ಆಡಳಿತದಲ್ಲಿ ರಾಜನಿಗೆ ನೆರವಾಗುತ್ತಿದ್ದರು. ಪ್ರತಿ ಗ್ರಾಮದಲ್ಲೂ ಪ್ರಾಥಮಿಕ ಶಿಕ್ಷಣಕ್ಕೆ ಅವಕಾಶ ವಿರುತ್ತಿತ್ತು ಮತ್ತು ಬೋಧಕರಿಗೆ ಉಚಿತವಾಗಿ ಭೂಮಿಯನ್ನು ನೀಡಲಾಗುತ್ತಿತ್ತು. ತಾಂತ್ರಿಕ ಶಿಕ್ಷಣದ ಬಗ್ಗೆ ಹೆಚ್ಚು ತಿಳಿದುಬಂದಿಲ್ಲ.

ವಿಷ್ಣುವರ್ಧನನ ಕಾಲದ ಕವಿಗಳಲ್ಲಿ ವಿಷ್ಣುವರ್ಧನನ ಮಂತ್ರಿಯಾದ ರಾಯನ ದಂಡಾಧಿಪನ ಮಗನಾದ ವಿಷ್ಣು ದಂಡಾಧಿಪನು ಮತ್ತು ಆ ಕಾಲದ ಜೈನ ಅರ್ಚಕ ಸಂತ ಮಹಂತ ಪ್ರಮುಖರು ಕ್ರಿ.ಶ. 1120ರಲ್ಲಿ ಕವಿ ರಾಜಾದಿತ್ಯನು ವಿಷ್ಣುವರ್ಧನನ ಆಸ್ಥಾನ ಕವಿಯಾಗಿದ್ದನು. ಅವನು ದೊಡ್ಡ ಜೈನ ವಿದ್ವಾಂಸನಾಗಿದ್ದನು ಮತ್ತು ಗಣಿತಶಾಸ್ತ್ರ ಮತ್ತು ರೇಖಾಗಣಿತದಲ್ಲಿ ವಿಶೇಷ ಅಧ್ಯಯನ ನಡೆಸಿದ್ದನು. ಇವನ ಕೃತಿಗಳು ವಯಾವಹರ ರತ್ನ, ಲೀಲಾವತಿ ಮತ್ತು ಚಿತ್ತಿಹಸುಗೆ ಮೊದಲಾದುವು.

ಉನ್ನತ ಸಂಸ್ಕೃತಿಯನ್ನು ಬಿಂಬಿಸುವ ಸಂಸ್ಕೃತವೇ ಆಗಿನ ಭಾಷೆಯಾಗಿತ್ತು. ಸಂಸ್ಕೃತದ ನಂತರ ಕನ್ನಡ ಸಾಹಿತ್ಯವು ಚಾರಿತ್ರಿಕ ಪ್ರಾಮುಖ್ಯತೆಯಲ್ಲಿಯೂ ಮತ್ತು ಸಾಹಿತ್ಯಿಕ ಮೌಲ್ಯದಲ್ಲಿಯೂ ಪ್ರಮುಖವಾಗಿತ್ತು.

ತಂದೆತಾಯಿಯರು ಮತ್ತು ಕುಟುಂಬದ ಇತರ ಸದಸ್ಯರೂ ಸಹ ಮಕ್ಕಳ ಶಿಕ್ಷಣದಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದರು. ಮನೆಯೇ ಮೊಟ್ಟ ಮೊದಲ ಶಾಲೆಯಾಗಿತ್ತು. ಮಗುವನ್ನು ಒಬ್ಬ ಉಪಾಧ್ಯಾಯನ ವಶಕ್ಕೆ ಒಪ್ಪಿಸುವ ವೇಳೆಗೆ ಮಗುವು ಓದಲು, ಬರೆಯಲು ಮತ್ತುಕಂಠಪಾಠ ಮಾಡುವುದನ್ನು ಕಲಿತಿರುತ್ತಿತ್ತು. ಶಿಕ್ಷಣವು ಕಡ್ಡಾಯವಾಗಿರಲಿಲ್ಲ. ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೆ ಶಿಕ್ಷಣ ಕೊಡಿಸುವುದರಲ್ಲಿ ಹೆಚ್ಚು ಗಮನ ಕೊಡಲಾಗುತ್ತಿತ್ತು. ಹೀಗೆ ಶಿಕ್ಷಣದ ಉದ್ದಿಶ್ಯವು ಬರೇ ಬೌದ್ಧಿಕ ಸಾಮರ್ಥ್ಯವನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುವುದಷ್ಟೇ ಅಲ್ಲ, ಜೊತೆಗೆ ಗುಣ ನಡತೆಯನ್ನು ತಿದ್ದುವುದು ಮತ್ತು ಧರ್ಮ ಸಿದ್ಧಾಂತದ ಮತ್ತು ನೈತಿಕ ಮೌಲ್ಯಗಳನ್ನು ಪ್ರತಿಪಾದಿಸುವುದೂ ಆಗಿತ್ತು. ತಾಯಿ ತಂದೆಯರ ನಂತರ ಗುರುವು ಅತ್ಯಂತ ಗೌರವಕ್ಕೆ ಪಾತ್ರರಾದ ವ್ಯಕ್ತಿಯಾಗಿದ್ದರು ಮತ್ತು ಅವರೇ ಆಶ್ರಮದ ಎಲ್ಲಾ ನಿವಾಸಿಗಳ ಕ್ಷೇಮಕ್ಕೆ ಜವಾಬ್ದಾರ ರಾಗಿರುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ, ಹೊಯ್ಸಳರ ಕಾಲವು ಸಾಹಿತ್ಯದ ಬೀಜಾಂಕುರದ ಕಾಲವಾಗಿತ್ತೆಂದು ಹೇಳಬಹುದು. ಅದು ಮುಂದೆ ಕಾಲಾಂತರದಲ್ಲಿ ಇನ್ನೂ ಶ್ರೀಮಂತವಾಗಿ ವಿವಿಧ ರೀತಿಯಲ್ಲಿ ಜ್ಞಾನದ ಸಂಪತ್ತಾಗಿ ಬೆಳೆಯಿತು.

## 2.5 ಧಾರ್ಮಿಕ ಪರಿಸ್ಥಿತಿ

ಹೊಯ್ಸಳರ ಕಾಲವು ಧರ್ಮಗಳ ಇತಿಹಾಸದಲ್ಲಿ ಪ್ರಮುಖವಾದುದು. ವಿಷ್ಣುವರ್ಧನನ ಆಳ್ವಿಕೆಯ ಪೂರ್ವದಲ್ಲಿ ಹೊಯ್ಸಳರಸರು ಅನ್ಯ ಮತಗಳಲ್ಲಿ ಸಹಿಷ್ಣುತೆಯನ್ನು ತೋರಿದರೂ ಯಾವಾಗಲೂ ಜೈನ ಧರ್ಮವನ್ನೇ ಅನುಸರಿಸುತ್ತಿದ್ದರು.

ವಿಷ್ಣುವರ್ಧನನ ಆಳ್ವಿಕೆಯ ಬಹುಮುಖ್ಯ ಘಟನೆಗಳಲ್ಲಿ ಮುಖ್ಯವಾದುದೆಂದರೆ ಕ್ರಿ.ಶ. 1116ರಲ್ಲಿ ಚೋಳ ದೇಶದಿಂದ ಬಂದ ಬಹುದೊಡ್ಡ ವೈಷ್ಣವ ಆಚಾರ್ಯರಾದ ಶ್ರೀ ರಾಮಾನುಜಾಚಾರ್ಯರಿಂದ ವೈಷ್ಣವ ಧರ್ಮಕ್ಕೆ ಪರಿವರ್ತನೆಯಾದುದು. ಜನಪ್ರಿಯ ಸಂಪ್ರದಾಯದ ಪ್ರಕಾರ ಆಚಾರ್ಯರು ಶೈವ ಮತಾನುಯಾಯಿಗಳಾದ ಚೋಳರ ಹಿಂಸೆ ತಾಳಲಾರದೆ ಆಶ್ರಯ ಪಡೆಯಲು ಮೈಸೂರಿಗೆ ಪಲಾಯನ ಮಾಡಿದರು. ಅವರು ನೀಲಗಿರಿಯ ಸಾಲಿಗ್ರಾಮ, ಮಿರಲೆ, ತೊಂಡನೂರು ಮಾರ್ಗವಾಗಿ ಮೈಸೂರಿಗೆ ಬಂದರು. ಇಲ್ಲಿ ರಾಜ ಬಿಟ್ಟಿದೇವನನ್ನು ಭೇಟಿ ಮಾಡಿದರು. ರಾಜನ ಕುವರಿಯು ದುಷ್ಟ ಶಕ್ತಿಯಿಂದ ಪೀಡಿತಳಾಗಿದ್ದಳು. ಅವರು ಆ ದುಷ್ಟ ಶಕ್ತಿಯಿಂದ ಆಕೆಯನ್ನು ಮುಕ್ತಗೊಳಿಸಿದರು ಮತ್ತು ರಾಜನನ್ನು ವೈಷ್ಣವ ಧರ್ಮಕ್ಕೆ ಪರಿವರ್ತನೆಗೊಳಿಸಿದರು. ನಂತರ ಅವನನ್ನು ವಿಷ್ಣುವರ್ಧನ

ನೆಂದು ಕರೆಯಲಾಯಿತು. ಈ ಘಟನೆಯ ನೆನಪಿಗಾಗಿ ರಾಜನು ತಲಕಾಡು, ಬೇಲೂರು, ತೊಣ್ಣೂರು, ಮೇಲುಕೋಟೆ ಮತ್ತು ಗದಗ್‌ಗಳಲ್ಲಿ ಐವರು ನಾರಾಯಣರ ದೇವಾಲಯುಗಳನ್ನು ಕಟ್ಟಿಸಿದನು.

ವಿಷ್ಣುವರ್ಧನನು ಯುದ್ಧದಲ್ಲಿ ಬಲಗೈಯ ಒಂದು ಬೆರಳನ್ನು ಕಳೆದುಕೊಂಡಿದ್ದರಿಂದ ಸನ್ಯಾಸಿಗಳು ವಿಷ್ಣುವರ್ಧನನೊಂದಿಗೆ ಭೋಜನ ಮಾಡಲು ನಿರಾಕರಿಸಿದರು. ಇದರಿಂದ ವಿಷ್ಣುವರ್ಧನನು ರಾಮಾನುಜಾಚಾರ್ಯರ ಅನುಯಾಯಿಯಾದನೆನ್ನುವ ವದಂತಿ ಇದೆ. ಶ್ರೀಕಂಠಯ್ಯ ನವರು ಹೇಳುವಂತೆ, ಬಿಟ್ಟಿದೇವನು ಜೈನರ ಹೆಚ್ಚುತ್ತಿದ್ದ ಉದ್ಧಟತನದಿಂದ ಬೇಸತ್ತು, ರಾಮಾನುಜರ ವಾದಗಳಿಂದ ಆಕರ್ಷಿತನಾದನು.

ಕ್ರಿ.ಶ. 1118ರಲ್ಲಿ ವಿನಯಾದಿಯತಿ ಎಂಬ ಜೈನಗುರು ಇದ್ದನು. ನಾಡಿನಲ್ಲಿ ಆತನ ಬಗ್ಗೆ ಪಟ್ಟಣಗಳಲ್ಲಿ ಗುರುವು ಭಕ್ತೆಯರ ಬಳಿಯೇ ಹೆಚ್ಚು ಹೋಗುವರೆಂಬ ವದಂತಿ ಹರಡಿತು. ಈ ರೀತಿಯ ಸಾಕ್ಷಿಗಳು ಕೆಲವೇ ಆದರೂ ಜೈನ ಅರ್ಚಕರ ಭ್ರಷ್ಟತೆ ಮತ್ತು ಅಹಂಕಾರದ ಬಗ್ಗೆ ಹೆಚ್ಚು ಬೆಳಕನ್ನು ಚೆಲ್ಲುತ್ತವೆ. ಆದುದರಿಂದಲೇ ಜನರೂ ಸಹ ಹೊಸ ಧರ್ಮವನ್ನು ಅಂಗೀಕರಿಸಲು ತಕ್ಷಣವೇ ಸಿದ್ಧರಾಗಿದ್ದರು.

ರಾಜನು ತನ್ನ ರಾಣಿಯರಲ್ಲಿ ಒಬ್ಬಳ ಮೂಲಕ ವೈಷ್ಣವನಾಗಲು ರಾಮಾನುಜರಿಂದ ಪ್ರಭಾವಿತನಾದನೆಂದು ಜೈನ ಇತಿಹಾಸವು ಹೇಳುತ್ತದೆ. ಕ್ರಿ.ಶ. 1117ರಲ್ಲಿ ವಿಷ್ಣುವರ್ಧನನು ತುಲ ಪುರುಷ, ಹಿರಣ್ಯಗರ್ಭ ಮತ್ತು ಅಶ್ವಮೇಧ ಎಂಬ ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸಿದನು. ಇವು ಒಬ್ಬ ದೊಡ್ಡ ಹಿಂದೂ ರಾಜನ ಕಾರ್ಯಗಳೇ ಆಗಿದ್ದುವು. ಇದರಿಂದ ಕ್ರಿ.ಶ. 1117ರ ಮೊದಲೇ ವಿಷ್ಣುವರ್ಧನನು ಪರಿವರ್ತನನಾದನೆಂದು ತಿಳಿದು ಬರುತ್ತದೆ. ಶ್ರವಣ ಬೆಳಗೊಳದಲ್ಲಿನ ಸ್ಥಳ ಪುರಾಣವೂ ಇದೇ ದಿನಾಂಕವನ್ನು ತಿಳಿಸುತ್ತದೆ. ನಂತರ ತನ್ನ ಹೆಸರನ್ನು ಮೊದಲಿನ 'ಬಿಟ್ಟಿದೇವನ ಬದಲಿಗೆ ವಿಷ್ಣುವರ್ಧನ' ಎಂದು ಬದಲಿಸಿಕೊಂಡನು.

ಇನ್ನೂ ಹೆಚ್ಚಿನ ಸಾಕ್ಷ್ಯಗಳನ್ನು ಶಿಲಾಶಾಸನಗಳಿಂದ ಪಡೆಯಬಹುದಾಗಿದೆ. ಅವನು ಜೈನ ಮಂದಿರಗಳಿಗಾಗಿ ತನ್ನ ಸೇನಾನಿಗಳಿಗೆ ಕ್ರಿ.ಶ. 1117ರಲ್ಲಿಯೂ ಸಹ ತನ್ನ ಮತಪರಿವರ್ತನೆ ಸಮಯದಲ್ಲಿಯೂ ಅನೇಕ ಸಹಾಯಧನ ನೀಡಿದ್ದನು. ಕ್ರಿ.ಶ. 1128ರಲ್ಲಿ ರಾಮಾನುಜರ ನೆಲೆಯಾದ ಯಾದವಪುರ ಅಥವಾ ಮೇಲುಕೋಟೆಯಲ್ಲಿ ಶೈವರು ವೈಷ್ಣವ ಪಂಥದ ಕಡು ಶತ್ರುಗಳಾಗಿದ್ದರೂ ಸಹ ಶೈವ ದೇವಾಲಯ ಒಂದಕ್ಕೆ ಧನಸಹಾಯ ನೀಡಿದನು. ಕ್ರಿ.ಶ. 1138ರಲ್ಲಿ ತನ್ನ ತಂದೆಯ ನೆನಪಿನಲ್ಲಿ ಶಿವ ದೇವಾಲಯ ಒಂದಕ್ಕೆ ಧನಸಹಾಯ ನೀಡಿದನು. ಕ್ರಿ.ಶ. 1138ರಲ್ಲಿ ಜೈನಗುರು ಮಧುಚಂದ್ರರಿಗೆ ತಾನೇ ವ್ಯಕ್ತಿಗತವಾಗಿ ಧನಸಹಾಯ ನೀಡಿದನು. ಹೀಗೆ ನಾವು ಇವನಿಂದ ವೈಷ್ಣವರಿಗೆ, ಶೈವರಿಗೆ

ಮತ್ತು ಜೈನರಿಗೆ ಬೇಕಾದಷ್ಟು ಸಹಾಯಧನ ನೀಡಿರುವುದನ್ನು ನೋಡುತ್ತೇವೆ. ಇದು ಅವನ ಸಹಿಷ್ಣುತಾ ಮನೋಭಾವವನ್ನು ಸಾಬೀತುಗೊಳಿಸಿದೆ.

ವಿಷ್ಣುವರ್ಧನನ ಆಳ್ವಿಕೆಯು ಅನೇಕ ಧಾರ್ಮಿಕ ಘಟನೆಗಳಿಂದ ಕೂಡಿ ವಿಶೇಷವೆನಿಸಿದೆ. ಶಿವನ ದೊಡ್ಡ ದೇವಾಲಯವು ರಾಜನ ಗೌರವಾರ್ಥ ಸೇನಾಧಿಪತಿ ಕೇತುಮಲ್ಲನಿಂದ ಕಟ್ಟಲ್ಪಟ್ಟಿತು. ಇತರ ಎರಡು ಶಿವಾಲಯುಗಳು, ಜಯಗೊಂಡ ಮತ್ತು ಮರ್‌ಬಲತೀರ್ಥ ಎಂಬಲ್ಲಿ ವಿಷ್ಣುವರ್ಧನ, ಆತನ ರಾಣಿ, ಐವರು ಮಂತ್ರಿಗಳ ಮಂತ್ರಿಮಂಡಲ ಎಲ್ಲರಿಂದ ಆರ್ಥಿಕ ನೆರವನ್ನು ಪಡೆದವು. ಇದು ರಾಜನು ಸ್ವಯಂ ವೈಷ್ಣವನಾದರೂ ಅವನ ಧಾರ್ಮಿಕ ಔದಾರ್ಯಕ್ಕೆ ಸಾಕ್ಷಿಯಾಗಿದೆ.

ಪ್ರೊಫೆಸರ್ ಎಂ.ವಿ.ಕೃಷ್ಣರಾವ್ ತಿಳಿಸುವಂತೆ, "ವಿಷ್ಣುವರ್ಧನನು ಕ್ರಿ.ಶ. 1115ರಲ್ಲಿ ವೈಷ್ಣವ ಧರ್ಮವನ್ನು ಅವಲಂಬಿಸಿದ ಒಂಭತ್ತು ವರುಷಗಳ ನಂತರ ಶ್ರೀಪಾದ ತ್ರೈವಿದ್ಯಾದೇವನೆಂಬ ಜೈನ ಗುರುವನ್ನು ಪೂಜಿಸಿದನು.

ಆದರೂ, ಅವನ ರಾಜ್ಯದಲ್ಲಿ ಧರ್ಮದ ಸಾಮರಸ್ಯವಿದ್ದಿತೆಂದು ಅಷ್ಟು ಸುಲಭವಾಗಿ ನಾವು ತಿಳಿಯುವಂತಿಲ್ಲ. ಹೊಯ್ಸಳ ರಾಜ್ಯದಲ್ಲಿಯೂ ಸಹ ಶೈವರಿಗೂ, ವೈಷ್ಣವರಿಗೂ ನಡುವೆ ತೀವ್ರ ಹೋರಾಟ ಕಂಡುಬರುತ್ತಿತ್ತು. ಕ್ರಿ.ಶ. 1120ರಲ್ಲಿ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ನರ್ತಕಿಯರು ವೈಷ್ಣವ ದೇವಾಲಯಗಳಲ್ಲಿ ಪೂಜಿಸಬಾರದೆಂದೂ ಮತ್ತು ಪುರುಷರು ಹುಡುಗಿಯರ ಜೊತೆ ನರ್ತಿಸುವವರನ್ನು ಮತ್ತು ಈ ಕಾನೂನನ್ನು ಮುರಿದವರನ್ನು ಜಾತಿಯಿಂದ ಬಹಿಷ್ಕಾರ ಹಾಕಲೇ ಬೇಕಾಗುವುದೆಂದು ಒಂದು ಕಾನೂನನ್ನು ಹೊರಡಿಸಲಾಯಿತು.

ಸುಮಾರು ಕ್ರಿ.ಶ. 1116ರಲ್ಲಿ ವಿಷ್ಣುವರ್ಧನನು ವೈಷ್ಣವನಾದರೂ ಅವನ ಪಟ್ಟದ ರಾಣಿಯಾದ ಶಾಂತಲೆಯು ಅವಳ ಜೀವಿತದ ಕೊನೆಯವರೆವಿಗೂ ಕಟ್ಟಾ ಜೈನಳೇ ಆಗಿದ್ದಳು. ಕ್ರಿ.ಶ. 1123ರಲ್ಲಿ ಆಕೆಯು ಸನ್ಯಾಸಿಗಳ ಕೂಟಕ್ಕೆ ಪೂಜೆ ಮತ್ತು ಉಡುಗೊರೆಗಳಾಗಿ ಆಹಾರವನ್ನು ನೀಡುವ ಸಲುವಾಗಿ ಅಲ್ಲದೆ ಎಲ್ಲಾ ತೆರಿಗೆಗಳಿಂದ ಮುಕ್ತವಾಗಿ ಸಹಾಯಧನ ನೀಡಲು ಶ್ರವಣ ಬೆಳಗೊಳದಲ್ಲಿ 'ಸವತಿಗಂಧವಾರಣಿ' ಎಂಬ ಬಸದಿಯನ್ನು ಕಟ್ಟಿಸಿದಳು. ಬೊಮ್ಮಲಾದೇವಿ ವಿಷ್ಣುವರ್ಧನನ ಮತ್ತೊಬ್ಬ ರಾಣಿಯು ಹಿಂದೂ ಧರ್ಮದ ಉತ್ಸಾಹಶಾಲೀ ಅನುಯಾಯಿ ಆಗಿದ್ದಳು. ಅವಳ ಪ್ರೋತ್ಸಾಹದಿಂದ ಅನೇಕ ದೇವಾಲಯಗಳು ಕಟ್ಟಲ್ಪಟ್ಟವು. ಕ್ರಿ.ಶ. 1135ರಲ್ಲಿ ಅವಳು ರಾಜನ ಅನುಮತಿಯನ್ನು ಪಡೆದು ನಾಗಮಂಗಲದಲ್ಲಿನ ಶಂಕರ ನಾರಾಯಣ ದೇವಸ್ಥಾನದ ದುರಸ್ತಿ ಮತ್ತು ನಿರ್ವಹಣೆಗಾಗಿ ಸಹಾಯಧನ ನೀಡಿದಳು.

ಈ ಕಾಲದಲ್ಲಿ ಉಡುಗೊರೆಗಳನ್ನು ಕೊಡುವುದರ ಮೂಲಕ ತಾವು ಧಾರ್ಮಿಕ ಉನ್ನತಿಯನ್ನು ಪಡೆದು ಸ್ವರ್ಗವನ್ನು ಪಡೆಯಬಹುದೆಂಬುದು ಒಂದು ಪ್ರಚಲಿತ ನಂಬುಗೆಯಾಗಿತ್ತು. ಬ್ರಹ್ಮದೇಯ, ದೇವಾದೇಯ ಮತ್ತು ಮಠಪುರ ಎಂಬವು ಆ ಧನಸಹಾಯದ ಹೆಸರುಗಳು. ಕ್ರಿ.ಶ. 1139ರಲ್ಲಿ ದೋರಸಮುದ್ರದ ದರ್ಜಿಗಳ ಕಂಪನಿಯೊಂದು ಮಹಿಳೆಯರ ಬಟ್ಟೆಗಳ ಕಟ್ಟಿನ ಮೇಲೆ ಮತ್ತು ದಾರದ ಉಂಡೆಗಳ ಮೇಲೆ ಕಿರು ವಂತಿಗೆಗಳನ್ನು ಸಂಗ್ರಹಿಸಿ, ಕುಸುಮೇಶ್ವರ ದೇವಾಲಯಕ್ಕೆ ಸಹಾಯಧನ ನೀಡಲಾಯಿತು. ಕ್ರಿ.ಶ. 1131ರಲ್ಲಿ ಮೊದಲನೇ ಬಲ್ಲಾಳನ ರಾಣಿಯ ತುಪ್ಪದ ಬಾಗಿಲಿನ ಎಲ್ಲಾ ಸೇವಕರು ದೇವ ಬಳ್ಳೇಶ್ವರನಿಗೆ ಸಹಾಯಧನ ನೀಡಿದರು.

ಹೀಗೆ ಒಟ್ಟಿನಲ್ಲಿ ವಿಷ್ಣುವರ್ಧನನ ಕಾಲದಲ್ಲಿ ಎಲ್ಲಾ ಧರ್ಮಗಳೂ ಮೆರೆದವು. ಯಾವುದೇ ಭೇದಬಾವವಿಲ್ಲದೆ ಎಲ್ಲಾ ಧರ್ಮಗಳಿಗೂ ಅವನು ಆಶ್ರಯ/ ಪ್ರೋತ್ಸಾಹವಿತ್ತನು. ಕರ್ನಾಟಕದಲ್ಲಿ ವೈಷ್ಣವ ಧರ್ಮದ ಇತಿಹಾಸದಲ್ಲಿ ವಿಷ್ಣುವರ್ಧನನ ಆಳ್ವಿಕೆಯ ಕಾಲವನ್ನು 'ಸುವರ್ಣಯುಗ' ಎಂದು ಕರೆಯಬಹುದು. ರಾಮಾನುಜರ ಬೋಧನೆಗಳು ಬಹು ಸರಳವಾಗಿದ್ದುವು ಮತ್ತು ಯಾವುದೇ ಭೇದ ಭಾವ ಇಲ್ಲದೆ ಅವರ ಧರ್ಮವು ಎಲ್ಲರಿಗೂ ಸ್ವಾಗತವಿತ್ತಿತು. ವಿಷ್ಣುವರ್ಧನನು ಜೈನ, ವೈಷ್ಣವ ಮತ್ತು ಶೈವ ದೇವಾಲಯಗಳಿಗೆ ಉದಾರ ಧನಸಹಾಯ ಮಾಡಿದನು. ಜೈನ ಬಸದಿಗಳೂ ಕಟ್ಟಲ್ಪಟ್ಟವು. ಅವನ ಆಳ್ವಿಕೆಯಲ್ಲಿ ದೇವಾಲಯಗಳಿಗೆ ಜನರಿಂದಲೂ ಉದಾರ ಧನಸಹಾಯ ಮಾಡಲ್ಪಟ್ಟಿತು.

## 2.6 ದಂಡನಾಯಕ ಉದಯ/ಉಗಮ

ದಂಡನಾಯಕ ಶಬ್ಧವು, ಮಹಾಪ್ರಚಂಡ, ದಂಡನಾಥ, ರಾಯದಂಡನಾಥ, ದಂಡಹಿತ, ದಂಡಶಿಶರ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗಿದೆ. ಆದರೆ, ಆಲ್ತೇಕರ್‌ರವರು ಮಹಾಪ್ರಧಾನ ದಂಡನಾಯಕನು ಯುದ್ಧ ಮಂತ್ರಿಯೆಂದು ಚಿತ್ರಿಸಿದ್ದಾರೆ. ದಿನಕರ ದೇಸಾಯಿಯವರು ಇದನ್ನು ಸಾಹಿತ್ಯಿಕವಾಗಿ ಸಿಬ್ಬಂದಿಗಳ ಪ್ರಸಿದ್ಧ ಸಮರ್ಥ ಒಡೆಯರೆಂದು ತರ್ಜುಮಿಸಿದ್ದಾರೆ. ದಂಡನಾಥರು ಸೈನ್ಯಾಧಿಕಾರಿಯಾಗಿದ್ದರು. ಹೊಯ್ಸಳರ ಕಾಲದಲ್ಲಿ ದಂಡನಾಯಕರ ಅತ್ಯಗತ್ಯವು ಹೊಯ್ಸಳರ ಆಡಳಿತದಲ್ಲಿ ತುಂಬ ಪ್ರಮುಖವಾದ ಸ್ಥಾನವನ್ನು ಆಕ್ರಮಿಸಿದೆ. ಆಗಾಗ್ಗೆ "ಮಹಾ ಪ್ರಧಾನ" ಮತ್ತು "ಸಂದಿವಿಗ್ರಹಿ" ಬಿರುದುಗಳನ್ನು ಹೊಂದಿದ್ದವರು ರಾಜ ಕುಟುಂಬದ ನಂಬಿಕಸ್ಥ ಸೇವಕರಾಗಿದ್ದರು. ಉದಾಹರಣೆಗೆ ವಿಷ್ಣುವರ್ಧನನ ಕಾಲದಲ್ಲಿ ಸಂದಿವಿಗ್ರಹಿಯಾಗಿದ್ದ, ಪುಣಿಸಮಯ್ಯ ದಂಡನಾಯಕ, 3ನೇ ನರಸಿಂಹನ ಕಾಲದಲ್ಲಿ ಮಹಾಪ್ರಧಾನನಾಗಿದ್ದ ಸೋಮಯ್ಯ ದಂಡನಾಯಕರು ಮತ್ತು "ಮಾಂಡಲಿಕರಜುಬು" "ಉದ್ಧಂಡ ಮಾಂಡಲಿಕರ ಗಂಡ" ಹಾಗೂ "ದಂಡನಾಥ ದೇವೇಂದ್ರ" ನಂತಹ ಬಿರುದುಗಳನ್ನು ಹೊಂದಿದ್ದರು.

ದಂಡನಾಯಕರು ರಾಜ್ಯದಲ್ಲಿ ಉನ್ನತ ದರ್ಜೆಯ ಕಛೇರಿ ಕೆಲಸದವರಾಗಿದ್ದರು. ಇವರ ಮುಖ್ಯ ಗುರಿಯು ರಾಜನಿಷ್ಠೆಯನ್ನು ಮತ್ತು ತಮ್ಮದೇ ಆದ ಸೈನ್ಯಗಳನ್ನು ಹೊಂದಿದ್ದು ನಾನಾ ರೀತಿಯ ಜಹಗೀರುದಾರರ ಸೈನ್ಯ ಸಹಾಯವನ್ನು ರಕ್ಷಿಸುವುದು ಮುಖ್ಯವಾಗಿತ್ತು. ವಿಷ್ಣುವರ್ಧನನ ಕಾಲದಲ್ಲಿ ಗಂಗರಾಜ, ಬೊಪ್ಪ, ಪುಣಸಮಯ್ಯ, ಬಿಟ್ಟಿಯಣ್ಣ, ಮರಿಯಾನೆ, ಭರತ, ಒಂದನೇ ನರಸಿಂಹನ ಕಾಲದಲ್ಲಿ ಏರೆಯಂಗಮಯ್ಯ, ಪರಿಸಯ್ಯ, ಸಂತಿಯಣ್ಣ, ಹಿರಿಯ ಬೊಮ್ಮಯ್ಯ, ಇಮ್ಮಡಿ ಬಲ್ಲಾಳನ ಕಾಲದಲ್ಲಿ ಜೀವ ರಕ್ಷಕ ಸೈನ್ಯ ದಳದವರು ಮತ್ತು ಆಭರಣ ಕೋಶಾಧ್ಯಕ್ಷರಾಗಿದ್ದ ಅಮಿತಯ್ಯ, ಭರತಮಯ್ಯ, ಅಪ್ಪಣ್ಣ, ಬಾಹುಬಲಿಯಂತಹ ಪ್ರಸಿದ್ಧ ರಾಜ ಪ್ರತಿನಿಧಿಗಳನ್ನು ಹೊಂದಿದ್ದರು.

## 2.7 ದಂಡನಾಯಕ/ಮಂತ್ರಿಗಳ ಅರ್ಹತೆಗಳು

'ಮಾನಸೋಲ್ಲಾಸ' ಗ್ರಂಥವು ಈ ಉನ್ನತ ಹುದ್ದೆಗಾಗಿ ಈ ಕೆಳಕಂಡ ಅರ್ಹತೆಗಳನ್ನು ಹೇಳಿದೆ.

1) ವ್ಯಕ್ತಿಯು ರಾಷ್ಟ್ರದ ಸ್ಥಳೀಯನಾಗಿರಬೇಕು.
2) ಉನ್ನತ ಕುಟುಂಬದಲ್ಲಿ ಜನಿಸಿರಬೇಕು.
3) ದೂರದೃಷ್ಟಿಯುಳ್ಳವನಾಗಿರಬೇಕು.
4) ಬುದ್ಧಿವಂತಿಕೆ ಹೊಂದಿರಬೇಕು.
5) ಉತ್ತಮ ಜ್ಞಾಪಕ ಶಕ್ತಿವಂತನಾಗಿರಬೇಕು.
6) ಹೆಚ್ಚು ದಕ್ಷನಾಗಿರಬೇಕು.
7) ವಾಕ್ಚತುರನಾಗಿರಬೇಕು.
8) ಧೈರ್ಯವಂತನಾಗಿರಬೇಕು.
9) ವಿಶೇಷ ಜ್ಞಾನವುಳ್ಳವನಾಗಿರಬೇಕು.
10) ಉತ್ಸಾಹ ಮತ್ತು ಗೌರವನ್ನು ಹೊಂದಿದವನಾಗಿರಬೇಕು.
11) ಸಹನೆ, ತಾಳ್ಮೆಯ ಯೋಗ್ಯತೆ ಇರಬೇಕು.
12) ಕಾಯ, ವಾಚ, ಮನಸ, ಶುದ್ಧತೆಯುಳ್ಳವನಾಗಿರಬೇಕು.
13) ರಾಜನಿಗೆ ದೃಢವಾಗಿ ಸಮರ್ಪಿಸುವ ಮನೋಭಾವನೆ ಇರಬೇಕು.
14) ದೈವದತ್ತವಾದ ಚಾರಿತ್ರ್ಯ, ಶಕ್ತಿ, ಆರೋಗ್ಯ ಮತ್ತು ಉನ್ನತ ಸ್ಫೂರ್ತಿಗಳು ಇರಬೇಕು.
15) ಅಹಂಕಾರ ಮತ್ತು ಚಂಚಲತೆಯಿಂದ ಮುಕ್ತನಾಗಿರಬೇಕು.
16) ಪ್ರೀತಿಯಿಂದ ಮತ್ತು ರಾಜ ಉಲ್ಲಂಘಿಸಿದಾಗ ಹಗೆತನವನ್ನು ಅವಲಂಬಿಸಿದವನಾಗಿರಬೇಕು.

## 2.8 ದಂಡನಾಯಕರ ಪ್ರಾಂತ್ಯಗಳು

1) ದಂಡನಾಯಕ, ನಾಡಾಳ್ವ (ನಾಡು ಪ್ರಾಂತ್ಯಾಧಿಪತಿ) ಪುಣಿಸಮಯ್ಯ.
2) ಮಹಾಪ್ರಧಾನ ದಂಡನಾಯಕ, ಭೂಪಯ್ಯ ಇವನು ತೊರೆನಾಡಿನ ಆಳ್ವಿಕೆಕಾರ.
3) ಮಹಾಪ್ರಧಾನ ಸರ್ವಾಧಿಕಾರಿ, ದಂಡನಾಯಕ ಬಿಟ್ಟಿಮಯ್ಯ, ಮಾಂಡಲಿಕ ಮತ್ತು ಮಯೆನಾಡಿನ ಮಾಂಡಲಿಕ.
4) ಮರ್ರುಸೆಯ ಮಂಡಲಸ್ವಾಮಿ.
5) ಮಹಾಪ್ರಧಾನ ತರನಾಡನ್ನು ಆಳುತ್ತಿದ್ದ ಕರೂರಿನ ಸರ್ವಾಧಿಕಾರಿ ಮಹಾಪಸಯಿತಿ ಅರಮತಿನಳ ದಂಡನಾಯಕ.
6) ಮಹಾಪ್ರಧಾನ, ಮಹಾಪಸಯಿತ ಹಿರಿಯ ದಂಡನಾಯಕ.
7) ಸಂಧಿವಿಗ್ರಹ ದಂಡನಾಯಕ ಮಹಾಪ್ರಧಾನ ಪುಣಿಸಮಯ್ಯ.
8) ಮಹಾಪ್ರಧಾನ ದಂಡನಾಯಕ ಗಂಗರಾಜ.
9) ಒರ್ವ ಹಂಪೆ ಒಡೆಯ ನಾಗದೇವರಸ ಮಣ್ಣಿಯ ಪ್ರಧಾನ.
10) ಹನಸೊಗೆಯ ಅಳಲನಾಥ ಚೆಂಚಪ್ಪದ ಮಣ್ಣಿಯ ಪ್ರಧಾನನಾಗಿದ್ದ.

# ಅಧ್ಯಾಯ 3
# ಹೊಯ್ಸಳರ ಅರಸ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿದ್ದ ದಂಡನಾಯಕರ ಮುಖ್ಯ ಕುಟುಂಬಗಳು

ಹೊಯ್ಸಳ ರಾಜಪ್ರಭುತ್ವದ ದಂಡನಾಯಕರು, ಕದಂಬ, ಚಾಳುಕ್ಯ, ಗಂಗ ಮತ್ತು ರಾಷ್ಟ್ರಕೂಟ ಅರಸರ ಸಂಪ್ರದಾಯವನ್ನೇ ಬಳುವಳಿಯಾಗಿ ಪಡೆದು ಕರ್ನಾಟಕದಲ್ಲಿ ಆ ಪರಂಪರೆಯನ್ನೇ ಮುಂದುವರೆಸಿಕೊಂಡು ಬಂದರು. ಎಲ್ಲಿಯವರೆವಿಗೆ ಹೊಯ್ಸಳರ ರಾಜಕೀಯ ಒಲವು ಚಿಕ್ಕಮಗಳೂರಿನ ಮಲೆನಾಡಿನ ಭಾಗಗಳಿಗೆ, ಮತ್ತು ಹಾಸನ ಜಿಲ್ಲೆಯ ಕೆಲ ಭಾಗಗಳಿಗೆ ಸೀಮಿತವಾಗಿದ್ದಿತೋ ಅಲ್ಲಿಯವರೆವಿಗೆ ಅವರ ಆಡಳಿತಾಧಿಕಾರಿಗಳ ಸಂಖ್ಯೆ ಹೆಚ್ಚಿಗೆ ಇರಲಿಲ್ಲ. ಆದರೆ ಹೊಯ್ಸಳರು ದಕ್ಷಿಣ ಕರ್ನಾಟಕದ ಮೈದಾನ ಜಿಲ್ಲೆಗಳಲ್ಲಿ ಅಂದರೆ ಹಾಸನ, ಮೈಸೂರು, ಬೆಂಗಳೂರು, ತುಮಕೂರು ಮತ್ತಿತರ ಜಿಲ್ಲೆಗಳಲ್ಲಿ ತಮ್ಮ ರಾಜಕೀಯ ಬಲವನ್ನು ವಿಸ್ತರಿಸುತ್ತ ಹೋದಂತೆ ಆಡಳಿತಾಧಿಕಾರಿಗಳ ಸಂಖ್ಯೆಯಲ್ಲಿ ಹೆಚ್ಚಳ ಇರುವುದನ್ನು ಕಾಣುತ್ತೇವೆ. ಅವರನ್ನು ಸಾಮಾಜಿಕ, ಧಾರ್ಮಿಕ, ಮತ್ತು ಆರ್ಥಿಕ ಹಿನ್ನಲೆಯಿಂದ ಆಯ್ಕೆ ಮಾಡಲಾಗುತ್ತಿತ್ತು ಮತ್ತು ಈ ದಂಡನಾಯಕರು ಹೊಯ್ಸಳ ಪ್ರಭುತ್ವದ ಆಧಾರ ಸ್ಥಂಭಗಳಂತಿದ್ದರು. ಈ ಆಡಳಿತಾಧಿಕಾರಿಗಳು ಮಾನವ ಮತ್ತಿತರ ಸಂಪನ್ಮೂಲಗಳನ್ನು ಹೊಯ್ಸಳ ಪ್ರಭುಗಳಿಗೆ ರವಾನಿಸುತ್ತಿದ್ದರು ಮತ್ತು ಹೊಯ್ಸಳರ ಚೈತ್ರ ಯಾತ್ರೆಗಳಲ್ಲಿ ಭಾಗವಹಿಸುತ್ತಿದ್ದರು ಮತ್ತು ತಮ್ಮ ತಮ್ಮ ಕಾರ್ಯ ಕ್ಷೇತ್ರಗಳಲ್ಲಿ ಧಾರ್ಮಿಕ ಮತ್ತು ಆರ್ಥಿಕಾಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಈಗ ನಾವು ಹೊಯ್ಸಳರ ಕೈ ಕೆಳಗಿದ್ದ ದಂಡನಾಯಕರ ಪ್ರಸಿದ್ಧ ಕುಟುಂಬಗಳಲ್ಲಿ ಕೆಲವೊಂದರ ಬಗ್ಗೆ ಮೊದಲು ಅಭ್ಯಾಸ ಮಾಡೋಣ.

## 3.1 ಸಾಮಂತ ಸೋಮನ ಕುಟುಂಬ

ನಾಗಮಂಗಲದಲ್ಲಿ ದೊರೆತಿರುವ ಕ್ರಿ.ಶ. 1143[1]ರ ಕಾಲದ ಶಿಲಾಲಿಪಿಯು ಸಾಮಂತ ಸೋಮನ ವಂಶಾವಳಿಯನ್ನು ತಿಳಿಸುತ್ತದೆ. ಇವನು ಹೊಯ್ಸಳ ವಿಷ್ಣುವರ್ಧನನ ಸಾಮಂತ ನಾಗಿದ್ದನು. ಈ ಕುಟುಂಬದ ಮೊದಲ ಸದಸ್ಯ ಐಕಣನಾಗಿದ್ದನು. ಕಾರಿಯ್ಯೆಕಣ ಸಾಮಂತನ ಹಿರಿಯ ಮಗನು ನಾಗನಾಗಿದ್ದನು.

**ಸಾಮಂತ ಕಾರಿಯ್ಯೆಕಣನ ಕುಟುಂಬದ ವಂಶಾವಳಿ**




ಪ್ರತಿ ತಲೆಮಾರಿಗೂ ಸಾಮಾನ್ಯವಾಗಿ 25 ವರುಷಗಳ ಆಳ್ವಿಕೆ ಎಂದು ಲೆಕ್ಕ ಹಾಕಿದರೂ, ಕರಿಯ್ಯೆಕಣನ ಕಾಲವು ಎಲ್ಲಿಯೋ ಕ್ರಿ.ಶ. 1065–1075ರ ಆಸುಪಾಸು ಎಂದು ನಿಗದಿ ಮಾಡಬಹುದು. ಸಾಮಂತನಾಗಿ, ಹೊಯ್ಸಳ ವಿನಯಾದಿತ್ಯನು ಆಳುತ್ತಿದ್ದಾಗ, ಇದೇ ಕಾಲದಲ್ಲಿ ಚೋಳನ ವಿರುದ್ಧ ದಂಡೆತ್ತಿ ಹೋದ ವೀರಗಾನ ಪರಮಾಡಿ, ಇವನೇ ಆಗಿದ್ದಿರಬಹುದೇ? ಎಂಬುದು ಸ್ಪಷ್ಟವಾಗಿಲ್ಲ. ಕಲ್ಯಾಣ ಚಾಲುಕ್ಯನಾದ ಇಮ್ಮಡಿ ಸೋಮೇಶ್ವರನ ಕಾಲವೂ ಇದೇ ಆಗಿದ್ದಿತು. ಹೀಗೆ ಈ ಸಾಮಂತ ಕುಟುಂಬದ ಎಪ್ಪತ್ತೇಳು ವರುಷಗಳ ಇತಿಹಾಸವು ಅನೇಕ ಸ್ವಾರಸ್ಯಕರ ಅಂಶಗಳನ್ನೊಳಗೊಂಡಿದೆ.

1) ಹೊಯ್ಸಳರ ಕಾಲದ ಸಾಮಂತ ಪದ್ಧತಿಯ ಅನುವಂಶೀಯ ಗುಣಲಕ್ಷಣ.
2) ನಾಡಿನ ಮಟ್ಟದಲ್ಲಿ ಸಾಮಂತರ ಸಂಘಟಿಸುವ, ನಿಭಾಯಿಸುವ ಮತ್ತು ರಾಜಕೀಯ ಅಧಿಕಾರವನ್ನು ಚಲಾಯಿಸುವ ಸಾಮರ್ಥ್ಯ.
3) ಹೊಯ್ಸಳರ ಆಕ್ರಮಣಕಾರೀ ಯುದ್ಧಗಳಲ್ಲಿ ಕುಟುಂಬದ ಭಾಗವಹಿಸುವಿಕೆ.
4) ಕುಟುಂಬದ ಸಾಮಂತ ಸ್ಥಾನ ಮಾನದ ಮೂಲವು ರಾಜತನಕ್ಕೆ ಅವರು ತೋರುವ ಧೈರ್ಯ ಸಾಹಸಗಳಲ್ಲಿ ಮತ್ತು ಸಮಯಕ್ಕೆ ಸರಿಯಾಗಿ ಅವರು ಸಲ್ಲಿಸುವ ಸೇವೆಯಲ್ಲಿ ಬೇರೂರಿತ್ತು.
5) ಜೈನಧರ್ಮಕ್ಕೆ ಕುಟುಂಬವು ನೀಡುವ ಪ್ರೋತ್ಸಾಹ.
6) ದಂಗೆಗಳನ್ನು ನಿಯಂತ್ರಿಸುವ ಮತ್ತು ಅಡಗಿಸುವ ಅವರ ಸಾಮರ್ಥ್ಯ.

## 3.2 ಕೌಸಿಕಾಕುಲ ಕುಟುಂಬ

ಕ್ರಿ.ಶ. 1145[2]ನೇ ಇಸವಿಯ ಮೊದಲನೇ ನರಸಿಂಹನ ಆಳ್ವಿಕೆಗೆ ಸೇರಿದ. ನಾಗಮಂಗಲದಲ್ಲಿ ದೊರೆತಿರುವ ಶಿಲಾಶಾಸನವು ಹೊಯ್ಸಳರಸರ ಆಡಳಿತದ ಉನ್ನತಾಧಿಕಾರಿಗಳಾದ ಕೌಸಿಕ ಕುಲದ ಸದಸ್ಯರಿಗೆ ಸಂಬಂಧಪಟ್ಟಂತೆ, ಕೆಲವು ವಿವರಗಳನ್ನು ತಿಳಿಸುತ್ತದೆ.

ಈ ಕುಟುಂಬದಲ್ಲಿ ದೇವರಾಜನು ವಿಷ್ಣುವರ್ಧನನ ಸಮಕಾಲೀನನಾಗಿದ್ದನು.

**ದೇವರಾಜನ ವಂಶಾವಳಿಯು ಹೀಗಿದೆ**




ವಿಷ್ಣುವರ್ಧನನ ಈ ಜೈನ ಅಧಿಕಾರಿ, ಮಹಾಪ್ರಧಾನ ಅಥವಾ ಮಹಾಮಾತ್ಯ ಮತ್ತು ತಂತ್ರವೆಗ್ಗಡೆಗಳ ಹುದ್ದೆಗಳನ್ನು ಹೊಂದಿದ್ದು, ಆ ಕಾಲದ ಹೊಯ್ಸಳ ಪ್ರಭುತ್ವದಲ್ಲಿ ಪ್ರಭು ಶಕ್ತಿಯನ್ನು ಹೆಚ್ಚಿಸುವ ಸಲುವಾಗಿ, ಅಗತ್ಯವಿದ್ದ ಎಲ್ಲಾ ಅರ್ಹತೆಗಳನ್ನು ಹೊಂದಿದ್ದನು. ಅವನ ವಯಕ್ತಿಕ ಧರ್ಮ ಜೈನಧರ್ಮವಾಗಿದ್ದು, ಜೈನಧರ್ಮಕ್ಕೆ ಆಶ್ರಯವನ್ನಿತ್ತಿದ್ದನು. ದಾಖಲೆಯು ತಿಳಿಸುವಂತೆ ವಿಷ್ಣುವರ್ಧನನು ದೇವರಾಜನಿಗೆ ಅವನ ಸೇವೆಯ ಕುರುಹಾಗಿ, ಕೆಲವು ಹಳ್ಳಿಗಳನ್ನು ಸಂಭಾವನೆಯ ರೂಪದಲ್ಲಿ ಅವನ ಸುಪರ್ಧಿಗೆ ಒಪ್ಪಿಸಿದನು. ಹೀಗೆ ಒಪ್ಪಿಸಲಾದ ಈ ಹಳ್ಳಿಗಳ ಒಂದು ಭಾಗವನ್ನು ಜೈನ ಬಸದಿಗಾಗಿ ಬಿಟ್ಟುಕೊಡಲಾಗಿತ್ತು.

### 3.3 ಮಹಾಸಾಮಂತ ಧರ್ಮನ ಅಥವಾ ದುಮ್ಮೇಯ ನಾಯಕನ ಕುಟುಂಬ

ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ ದೊರೆತಿರುವ ಕ್ರಿ.ಶ. 1179ನೇ ವರ್ಷದೆಂದು ಹೇಳಬಹುದಾದ ಎರಡು ದಾಖಲೆಗಳು ಈ ಕುಟುಂಬದ ಸದಸ್ಯರ ರಾಜಕೀಯ ಮತ್ತು ಧಾರ್ಮಿಕ ಚಟುವಟಿಕೆಗಳ ಬಗ್ಗೆ ತಿಳಿಸುತ್ತವೆ. ಮಾರಸಿಂಗೇಗವುಂಡ, ಪುರುಷ ಮಾಣಿಕ್ಯಶೆಟ್ಟಿ, ಮಹಾಸಾಮಂತ ಹೆಮ್ಮೆಯ ನಾಯಕ ಈ ಕುಟುಂಬಕ್ಕೆ ಸೇರಿದವರಾಗಿರುತ್ತಾರೆ.[3]

### 3.4 ಮಾರಸಿಂಗ ಗವುಂಡನ ಕುಟುಂಬದ ವಂಶಾವಳಿ

ಈ ಕುಟುಂಬದ ಮೊಟ್ಟ ಮೊದಲ ಸದಸ್ಯ ರಾಜಾಧಿರಾಜ ಎಂಬ ಬಿರುದಿಗೆ ಪಾತ್ರನಾಗಿದ್ದ ನಲ್ಲದೆ, ತಲಕಾಡಿನ ಮುಖ್ಯಸ್ಥನಾಗಿದ್ದನೆಂಬುದು ತಿಳಿದು ಬರುತ್ತದೆ. ಈ ಕುಟುಂಬದ ವಂಶಾವಳಿ ಹೀಗಿದೆ.

**ಮಾರಸಿಂಗ ಗವುಂಡನ ವಂಶಾವಳಿಯು ಹೀಗಿದೆ**




## 3.5 ಮಹಾಸಾಮಂತ ಮರಿಯಾನೆ ದಂಡನಾಯಕನ ಕುಟುಂಬ

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿ ದೊರೆತಿರುವ ಅಲಿ ಸಂದ್ರ ದಾಖಲೆಯು ಪ್ರಸಿದ್ಧ ಮರಿಯಾನೆ ದಂಡನಾಯಕನ ಕುಟುಂಬದ ಬಗ್ಗೆ ದೀರ್ಘ ವಿವರವನ್ನು ಕೊಡುತ್ತದೆ.[4] ಮರಿಯನೆಯ ಬಾವಮೈದುನನೇ ಪ್ರಸಿದ್ಧನಾದ ಸೇನಾನಿ ಗಂಗರಾಜ.

ಮರಿಯಾನೆ ದಂಡನಾಯಕನ ಕುಟುಂಬಕ್ಕೆ ಸಂಬಂಧಿಸಿದಂತೆ ದಾಖಲೆಗಳ ಅಧ್ಯಯನವು ರಾಜತನದೊಂದಿಗೆ, ಕುಟುಂಬದ ಸಂಬಂಧವನ್ನು ಕುರಿತು ಮತ್ತು ಹೊಯ್ಸಳ ಪ್ರಭುಗಳಿಗೆ ಅದರ ಹತ್ತಿರ ಹತ್ತಿರ 135 ವರ್ಷಗಳವರೆಗಿನ ಜಿಲ್ಲೆಯ ಸೇವೆಯ ಬಗ್ಗೆ ಅನೇಕ ಸ್ವಾರಸ್ಯಕರ ಸಂಗತಿಗಳನ್ನು ಹೊರಗೆಡವುತ್ತದೆ.

ರಾಜ ವಿಷ್ಣುವರ್ಧನನ ಕೈ ಕೆಳಗೆ ಗಂಗರಾಜನು ಬಹಳ ಪ್ರಸಿದ್ಧನಾದನು. ಶಿಲಾಲಿಪಿಯು ಗಂಗರಾಜನ ಬಗ್ಗೆ ಹೀಗೆಯೇ ತಿಳಿಸುತ್ತದೆ.

ಹೊಯ್ಸಳರಸರಿಗೆ, ಹಿರಿಯ ಮರಿಯನೆಯ ಸಂಬಂಧಿಕರು ಸಲ್ಲಿಸಿರುವ ಸೇವೆಯ ಬಗ್ಗೆ ಶಿಲಾಶಾಸನದಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ ಮತ್ತು ಪ್ರಸಿದ್ಧನಾದ ಕಿರಿಯ ಮಹಾಪ್ರಧಾನ ಮರಿಯನೆಯ ಸಾಧನೆಗಳನ್ನು ವರ್ಣಿಸುವಾಗ ಗಂಗರಾಜನ ಮಗನಾದ ಇಚಿರಾಜನ ಬಾವಮೈದುನಂದಿರಾದ ಪ್ರಸಿದ್ಧ ಕಿರಿಯ ಮಹಾಪ್ರಧಾನ ದಂಡನಾಯಕ ಮತ್ತು ಭರತೇಶ್ವರ ದಂಡನಾಯಕರಿಬ್ಬರ ಸಾಧನೆಗಳ ಸ್ಪಷ್ಟ ಉಲ್ಲೇಖವೂ ಶಿಲಾಶಾಸನದಲ್ಲಿ ಕಂಡುಬರುತ್ತದೆ.

ಈ ಇಬ್ಬರು ಸಹೋದರರು ಎರಡು ಹುದ್ದೆಗಳಲ್ಲಿ ಸರ್ವಾಧಿಕಾರಿಗಳ ಹುದ್ದೆ ಮತ್ತು ಆಭರಣಗಳ ಸಂಪತ್ತಿನ ಮಾರಿಕ ಭಂಡಾರಿಗಳ ಹುದ್ದೆ ಮತ್ತು ಪ್ರಾಣರಕ್ಷಣೆ ಮಾಡುವ

ಪ್ರಾಣಾಧಿಕಾರಿಗಳ ಹುದ್ದೆಗಳಲ್ಲಿ ವಿಷ್ಣುವರ್ಧನನ ಕೈಕೆಳಗೆ ಇದ್ದರೆಂಬುದಾಗಿ ಶಿಲಾಶಾಸನದಲ್ಲಿ ದಾಖಲೆಗಳು ದೊರೆಯುತ್ತವೆ.

**ಅಡಿಟಿಪ್ಪಣಿಗಳು**

1) E.C. VII Ng 169
2) Ibid Text p 168
3) Ibid Ng. 64
4) Ibid Ng. 130

# ಅಧ್ಯಾಯ 4
# ಹೊಯ್ಸಳರಸ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿದ್ದ ಪ್ರಮುಖ ದಂಡನಾಯಕರು

ಇತಿಹಾಸದ ಯಾವುದೇ ಕಾಲದಲ್ಲಿಯಾದರೂ, ದಂಡನಾಯಕರು ರಾಜಕೀಯ ವಿನ್ಯಾಸದ ಆಧಾರಸ್ಥಂಭಗಳೇ ಆಗಿರುತ್ತಾರೆ. ಅದು ರಾಜಪ್ರಭುತ್ವವೇ ಇರಬಹುದು. ಪ್ರಜಾಪ್ರಭುತ್ವವೇ ಇರಬಹುದು ಅಥವಾ ಶ್ರೀಮಂತರ ಆಳ್ವಿಕೆಯೇ ಇರಬಹುದು. ಪ್ರಭುತ್ವ ಯಾವುದೇ ಬಗೆಯದಾಗಿರಲಿ, ದಕ್ಷ ಆಡಳಿತಗಾರರ ಬೆಂಬಲವಿಲ್ಲದೆ, ಯಾವುದೇ ವ್ಯವಸ್ಥೆಯು ತಾನೇ ಏಕಾಂಗಿಯಾಗಿ ಸ್ವತಃ ನಿಲ್ಲಲಾರದು. ಅದಕ್ಕಾಗಿಯೇ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ತಿಳಿಸಿರುವಂತೆ, ರಥದ ಒಂದೇ ಗಾಲಿಯು ಸ್ವಯಂ ಚಲಿಸಲಾರದು. ಅದರ ಚಲನೆಗೆ ರಥದ ಇನ್ನುಳಿದ ಭಾಗಗಳ ಸಹಾಯ ಅವಶ್ಯವಾಗಿ ಬೇಕು. ಪ್ರಾಚೀನ ಭಾರತೀಯ ರಾಜಕೀಯ ವಿಚಾರಧಾರೆಯಂತೆ, ಅದರಲ್ಲೂ ಕೌಟಿಲ್ಯನು ತಿಳಿಸುವಂತೆ ಪ್ರಭುವು ರಾಜಕೀಯ ಪದ್ಧತಿಯಲ್ಲಿ ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಶಕ್ತಿ ಇವುಗಳನ್ನು ಅಗತ್ಯವಾಗಿ ಹೊಂದಿರಬೇಕು. ಮಂತ್ರಶಕ್ತಿ ಅಥವಾ ಮಂತ್ರಾಲೋಚನೆ ಯಡಿಯಲ್ಲಿ ಮಂತ್ರಿಗಳ ಮತ್ತು ಅಧಿಕಾರಿಗಳ ಪಾತ್ರವೇ ಮುಖ್ಯವಾಗಿ. ಅವರು ಆಡಳಿತದ ಶಿಲ್ಪಿಗಳೇ ಆಗಿದ್ದರು. ಹೊಯ್ಸಳ ಪ್ರಭುಗಳ ದಂಡನಾಯಕರು, ಕದಂಬ, ಚಾಲುಕ್ಯ, ಗಂಗ ಮತ್ತು ರಾಷ್ಟ್ರಕೂಟರ ಸಂಪ್ರದಾಯವನ್ನೇ ಬಳುವಳಿಯಾಗಿ ಪಡೆದು, ಅದೇ ಪರಂಪರೆಯನ್ನೇ ಕರ್ನಾಟಕದಲ್ಲಿ ಬೆಳೆಸಿಕೊಂಡು ಬಂದರು.

### 4.1 ಸಾಮಂತ ಸೋಮ

ಅವನು ಹೊಯ್ಸಳ ವಿಷ್ಣುವರ್ಧನನ ಸಾಮಂತನಾಗಿದ್ದನು. ಒಂದು ಶಿಲಾಶಾಸನವು ಅವನನ್ನು ಹೀಗೆ ಬಣ್ಣಿಸುತ್ತದೆ. ಯುದ್ಧದಲ್ಲಿ ಭೀಮ, ಜಿನನ ಚರಣ ಕಮಲಗಳಲ್ಲಿ ದುಂಬಿ, ಜಿನನಾಥನ ಮಜ್ಜನಕ್ಕೆ ಬಳಸಿದ ನೀರಿನಿಂದ ಶರೀರವನ್ನು ಪಾವನಗೊಳಿಸಿಕೊಂಡವನು. ಸೊಕ್ಕಿದ ವೈರಿಗಳ ನಾಯಕರನ್ನೂ ಅಥವಾ ಅಧಿಪತಿಗಳನ್ನೂ, ಯುದ್ಧರಂಗದಲ್ಲಿ ಮಣ್ಣುಮುಕ್ಕಿಸಿ, ತನ್ನ ಘರ್ಜನೆಯಿಂದ ದಿಗಂತಗಳಲ್ಲಿಯೂ ತನ್ನ ಕೀರ್ತಿ ಪತಾಕೆಯನ್ನು ಹಾರಿಸಿದವನು. ಇವನು ಭೀಮನೋ? ಅಥವಾ ಶೂದ್ರಕನೋ? ಓರ್ವ ಧನಂಜಯನೋ? ಅಥವಾ ರಾಮನೋ? ಅಥವಾ ದುಂಡುಮರನೋ? ಓರ್ವ ನಳನೋ? ನಹುಷನೋ? ಅಥವಾ ಸೋಮದೇವನೋ? ಹೀಗಿದ್ದನು ಸೋವಣ, ಸರ್ಪಕ್ಕೆ ಒಬ್ಬ ಗರುಡನಂತೆ ಅದೃಷ್ಟಶಾಲಿ ಇವನು; ಜಿನದೇವನೇ ಇವನ ದೇವರು; ಹೊಯ್ಸಳರಸ ವಿಷ್ಣುವೇ ಇವನ ರಕ್ಷಕ; ಒಳ್ಳೆಯ ನಡತೆ – ಚಟ್ಟದೇವ ಮತ್ತು ಕಾಳಿದೇವ – ಇವನ ಅದ್ವಿತೀಯ ಅನುಪಮ ಕುವರರೀರ್ವರು ಇಂತಹ ಪ್ರಗತಿಶೀಲ ಸೋವಣನು ಈ ಭೂಮಿಯ ಮೇಲೆ ಬಹಳ ಕೀರ್ತಿ ಸಂಪಾದಿಸಿದನು.

ಎಲ್ಲಾ ಒಳ್ಳೆಯ ಗುಣಗಳಿಂದ ಕೂಡಿ, ಗುಣಸಂಪನ್ನನಾದ ಸಾಮಂತ ಸೋಮನು ವಿದ್ವಾಂಸರಿಗೆ ಆಶ್ರಯವಿತ್ತು ಅವರಿಗೆ ಉದಾರವಾಗಿ ಆಹಾರ, ಆಶ್ರಯ ಮತ್ತು ಔಷಧಗಳನ್ನು ಉಡುಗೊರೆಯಾಗಿ ನೀಡುವುದರಲ್ಲಿ ಹೆಚ್ಚು ಸಂತೋಷವನ್ನು ಕಾಣುತ್ತಿದ್ದನು. ಕಲಿಕೆಯಲ್ಲಿ ಬಹಳ ಪ್ರೀತಿ ಇತ್ತು. ಭಾನುಕೀರ್ತಿ-ಸಿದ್ಧಾರ್ಥದೇವನ ಶಿಷ್ಯನಾದ ಸೋವೆಯ ನಾಯಕನು, ಕಲುಕುನಿ ನಾಡನ್ನು ಆಳುತ್ತಿದ್ದಾಗ ಹೆಬ್ಬಿದುರುವಾಡಿಯಲ್ಲಿ, ಬೃಹತ್ ಚೈತ್ಯಾಲಯವನ್ನು ಕಟ್ಟಿಸಿದನು. ಅಲ್ಲದೆ ಅಂಗಭೋಗಕ್ಕಾಗಿ ಮತ್ತು ದೇವರ ನೈವೇದ್ಯಕ್ಕಾಗಿ, ಬಸದಿಯ ವಾಯುವ್ಯ ಭಾಗದಲ್ಲಿರುವ ಅರುಹನಹಳ್ಳಿಯನ್ನು ಬಿಟ್ಟುಕೊಟ್ಟನಲ್ಲದೆ, ದೈವವಾದ ಪರ್ಸ್ವದೇವನ ಪೂಜೆಗೆ ಮೀಸಲಿರಿಸಿದನು ಮತ್ತು ಬಸದಿಯ ರಿಪೇರಿಗಾಗಿಯೂ ದಾನವಾಗಿ ನೀಡಿದನು.

ಸಾಮಂತ ಸೋಮನ ಕುಟುಂಬವು ಹೊಯ್ಸಳರಸರ ಸೇವೆಯಲ್ಲಿ 77 ವರುಷಗಳ ಕಾಲ ಆಳಿತು. ಇವರೆಲ್ಲರೂ ಹೊಯ್ಸಳ ವಂಶದರಸರಿಗೆ ನಿಷ್ಟರಾಗಿದ್ದರು.

ಕೆಲವೊಂದು ಸ್ವಾರಸ್ಯಕರ ಅಂಶಗಳೆಂದರೆ,

1) ಸಾಮಂತ ಪದ್ಧತಿಯ ಅನುವಂಶೀಯ ಗುಣ.
2) ನಾಡಿನ ಮಟ್ಟದಲ್ಲಿ ರಾಜಕೀಯ ಬಲವನ್ನು ಸಂಘಟಿಸುವ, ನಿರ್ವಹಿಸುವ, ಮತ್ತು ಚಲಾಯಿಸುವ ರೀತಿ.
3) ಆಕ್ರಮಣಕಾರೀ ಯುದ್ಧಗಳಲ್ಲಿ ಕುಟುಂಬದ ಭಾಗವಹಿಸುವಿಕೆ.
4) ಜೈನ ಧರ್ಮಕ್ಕೆ ಕುಟುಂಬದ ಆಶ್ರಯ ಮತ್ತು
5) ದಂಗೆಗಳನ್ನು ನಿಯಂತ್ರಿಸುವ ಮತ್ತು ಅಡಗಿಸುವ ಅವರ ಜವಾಬ್ದಾರಿ.

### 4.2 ದೇವರಾಜ

ದೇವರಾಜನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಮುಖ್ಯನಾದ ದಂಡನಾಯಕನಾಗಿದ್ದನು. ಇವನು ಮುಖ್ಯನಾದ ಅಂಗರಕ್ಷಕನೂ ಮತ್ತು ಪ್ರಸಿದ್ಧನಾದ ಮಹಾಪ್ರಧಾನನೂ ಆಗಿದ್ದನು. ಇಡೀ ರಾಜ್ಯದ ಹೊರೆಯನ್ನು ಹೊರಲು ಇವನು ಸಮರ್ಥನೆಂದು, ಹೊಯ್ಸಳರಸನಿಗೆ ಗೊತ್ತಿದ್ದರಿಂದ, ರಾಜನು ಬಹಳ ಪ್ರೀತಿಯಿಂದ, ಇಡೀ ರಾಜ್ಯದ ಹೊಣೆಯನ್ನು ಇವನಿಗೆ ವಹಿಸಿದನು. ಪ್ರಭು ಶಕ್ತಿಯನ್ನು ಹೊಂದಿದ ಈ ಹಿರಿಮೆಯಿಂದ ಎಂದೆಂದಿಗೂ ಇವನು ಹೆಮ್ಮೆಯಿಂದಲೇ ತಂತ್ರವೆಗ್ಗಡೆ ಎನಿಸಿದನು.

ಈ ಅಧಿಕಾರಿಯು ಸುರನಹಳ್ಳಿ ಎಂಬಲ್ಲಿ 'ತ್ರಿಕೂಟ ಬಸದಿ'ಯೊಂದನ್ನು ಕಟ್ಟಿಸಿದನು. ಈ ಹಳ್ಳಿಯು ಇವನಿಗೆ ರಾಜನಿಂದ ದಾನವಾಗಿ ಕೊಡಲ್ಪಟ್ಟಿತ್ತು ಮತ್ತು ದೇವಾಲಯದಲ್ಲಿ ಪೂಜೆಗಾಗಿ ಮತ್ತು ಕಾಣಿಕೆಗಳು ಇತ್ಯಾದಿಗಳಿಗಾಗಿ ರಾಜನು ಆ ಹಳ್ಳಿಯ ಮೊದಲ ಹತ್ತು

ಬೆಳೆಗಳ ಫಸಲಿನ ಭಾಗಗಳನ್ನು, ಬಹುಶಃ ವಾರ್ಷಿಕ ವರಮಾನವಾಗಿ ಅದು ಮೊದಲು ನಲವತ್ತು ಬೆಳೆಗಳ ಭಾಗಗಳಾ ಗಿದ್ದವೆಂದು ತೋರುತ್ತದೆ. ಆ ಭೂಮಿಯನ್ನು ದಾನವಾಗಿ ಕೊಟ್ಟಿದ್ದನು. ನಂತರ ಅದನ್ನು ಮಿನಿಚಂದ್ರದೇವನಿಗೆ ವರ್ಗಾಯಿಸಲ್ಪಟ್ಟಿತ್ತು. ಈ ರೀತಿ ದಾನವಾಗಿ ನೀಡಲ್ಪಟ್ಟ ಹಳ್ಳಿಯ ಭಾಗವನ್ನು ಪರಸ್ವಪುರ ಎಂದು ಕರೆಯಲಾಗುತ್ತಿತ್ತೆಂದು ತೋರುತ್ತದೆ.

ವಿಷ್ಣುವರ್ಧನನ ಈ ಜೈನ ಅಧಿಕಾರಿಯು ಮಹಾಪ್ರಧಾನ ಅಥವಾ ಮಹಾಮಾತ್ಯ ಮತ್ತು ತಂತ್ರವೆಗ್ಗಡೆಯ ಹುದ್ದೆಗಳಲ್ಲಿದ್ದುದಲ್ಲದೆ, ಹೊಯ್ಸಳ ರಾಜ್ಯದಲ್ಲಿ ಪ್ರಭುಶಕ್ತಿಯನ್ನು ವರ್ಧಿಸುವಂತೆ, ಸಹಾಯ ಮಾಡಲು ಅಗತ್ಯವಿದ್ದ ಎಲ್ಲಾ ಅರ್ಹತೆಗಳನ್ನೂ ಹೊಂದಿದ್ದನು. ತನ್ನ ವಯುಕ್ತಿಕ ಧರ್ಮವಾಗಿದ್ದ ಜೈನಧರ್ಮವನ್ನೇ ಪೋಷಿಸಿದನು. ಇವನ ಕಾರ್ಯಗಳಿಗೆ ಸಂಭಾವನೆಯ ದ್ಯೋತಕವಾಗಿ ವಿಷ್ಣುವರ್ಧನನು ದೇವರಾಜನಿಗೆ ಹಳ್ಳಿಗಳನ್ನು ಒಪ್ಪಿಸಿದ್ದನೆಂದು ದಾಖಲೆಯು ತಿಳಿಸುತ್ತದೆ. ಹೀಗೆ ತನಗೆ ನೀಡಲಾಗಿದ್ದ ಹಳ್ಳಿಗಳ ಸ್ವಲ್ಪ ಭಾಗವನ್ನು ಜೈನ ಬಸದಿಗಾಗಿ ದಾನವಾಗಿ ನೀಡಲಾಗಿತ್ತು.

### 4.3 ಮರಿಯಾನೆ ದಂಡನಾಯಕ

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಅಲಿಸಂದ್ರ ದಾಖಲೆಯು ಪ್ರಸಿದ್ಧ ಮರಿಯಾನೆ ದಂಡನಾಯಕನ ಕುಟುಂಬದ ಬಗ್ಗೆ ದೀರ್ಘ ವಿವರವನ್ನು ಕೊಡುತ್ತದೆ. ಇದು ಕ್ರಿ.ಶ. 1183ನೇ ವರ್ಷಕ್ಕೆ ಸೇರಿದ ಒಂದು ಸಂಯುಕ್ತ ದಾಖಲೆ. ಆದರೆ ಇದಕ್ಕೆ ಮುನ್ನ ಕ್ರಿ.ಶ. 1048–1103 ಮತ್ತು 1182ನೇ ಇಸವಿಗಳಲ್ಲಿ ನೀಡಿದ ದಾನಗಳಿಗೆ ಸಂಬಂಧಪಟ್ಟಿರುತ್ತದೆ. ಹೀಗೆ ಇದು ವಿಷ್ಣುವರ್ಧನನ ಮತ್ತು ಮೊದಲನೇ ನರಸಿಂಹನ ಆಳ್ವಿಕೆಯ 135 ವರ್ಷಗಳಲ್ಲಿ ನಡೆದ ಘಟನೆಗಳಿಗೆ ಇದು ಸಂಬಂಧಪಟ್ಟಿದೆ.

ಮರಿಯಾನೆಯನ್ನು ವಿನಯಾದಿತ್ಯನ ಪತ್ನಿಯುದ ಕಲೆಯ ಬರಸಿಯು ತನ್ನ ಸ್ವಂತ ಕಿರಿಯ ಸಹೋದರನಂತೆ ಸಾಕಿ ಸಲುಹಿದಳು. ಮರಿಯಾನೆ ದಂಡನಾಯಕನು ಉಡುಗೊರೆಯಾಗಿ ಸಿಂದ ಗೆರೆಯನ್ನು ಪಡೆದನು. ಪ್ರಸಿದ್ಧನಾದ ದಂಡನಾಯಕನಾದ ಗಂಗರಾಜನು ಮರಿಯಾನೆಯ ಭಾವ ಮೈದುನನಾಗಿದ್ದನು. ಇವನ ಮಗ ಈಚ ಅಥವ ಬೊಪ್ಪನೆಂಬುವನು. ಈ ಈಚನ ಬಾವ ಮೈದುನಂದಿರೇ ಈರ್ವರು. ಮರಿಯಾನೆ ದಂಡನಾಯಕ ಮತ್ತು ಭರತೇಶ್ವರ ದಂಡನಾಯಕ.

ದೇಖಲೆ ಮರಿಯಾನೆಯ ಪತ್ನಿಯು ಗಂಗರಾಜನ ಸೋದರಿಯಾಗಿದ್ದಳು. ಕುಟುಂಬದ ಹಿರಿಮೆಯು ನಿಶ್ಚಿತವಾಗಿಯೂ, ಹಿರಿಯ ಮರಿಯಾನೆಯ ಚುಂಬಕ ಶಕ್ತಿಯ ವ್ಯಕ್ತಿತ್ವದ ದೆಸೆಯಿಂದಲೇ ಆಗಿದ್ದಿತು. ಅವನ ವಿಶಿಷ್ಟ ಗುಣಗಳಿಂದ ಮತ್ತು ಸಾಮರ್ಥ್ಯದಿಂದ,

ಕಲೆಯರಸಿ ಮತ್ತು ವಿನಯಾದಿತ್ಯನ ವಿಶ್ವಾಸವನ್ನು ಗಳಿಸಲು ಎಷ್ಟು ಸಮರ್ಥನಾದನೆಂದರೆ, ರಾಣಿಯು ಅವನನ್ನು ತನ್ನ ಕಿರಿಯ ಸೋದರನಂತೆಯೇ ಭಾವಿಸಿದಳಲ್ಲದೆ, ದೇಕವೆ ದಂಡನಾಯಕಿಯನ್ನು ಮರಿಯಾನೆ ದಂಡನಾಯಕನಿಗೆ ವಿವಾಹ ಮಾಡಿಕೊಟ್ಟನು. ಜೊತೆಗೆ ಕ್ರಿ.ಶ. 1048ರಲ್ಲಿ ಅಸಂದಿ ನಾಡಿನಲ್ಲಿ ಸಿಂಧಗೆರೆಯ ಮುಖ್ಯಸ್ಥನನ್ನಾಗಿಯೂ ಮಾಡಿದಳು. ಆಗಿನಿಂದ ಹೊಯ್ಸಳ ರಾಜ್ಯದಲ್ಲಿ ಕುಟುಂಬದ ನಕ್ಷತ್ರವು ಮೇಲೇರತೊಡಗಿತು. ಮರಿಯಾನೆಗೆ ಮದುವೆಯ ಉಡುಗೊರೆಯಾಗಿ, ಸಿಂದಗೆರೆಯನ್ನು ವಹಿಸಿಕೊಟ್ಟದ್ದು, ಕುಟುಂಬದ ಪ್ರತಿಷ್ಠೆಗೆ ಸೂಕ್ತ ಆಧಾರವಾಯಿತು. ಮರಿಯಾನೆ ದಂಡನಾಯಕನು, ಪ್ರತಿಭಾನ್ವಿತೆಯರೂ, ರೂಪವತಿಯರೂ ಆದ ತನ್ನ ಮೂವರು ಕುವರಿಯರನ್ನು ಪದುಮಲಾದೇವಿ, ಚಮ್ಮಲಾದೇವಿ ಮತ್ತು ಬೊಪ್ಪದೇವಿಯರ ವಿವಾಹವನ್ನು ಈರೇಯನ ಕುವರನಾದ ಬಲ್ಲಾಲ್ಯನೊಂದಿಗೆ ನೆರವೇರಿಸಿದಾಗ ಹೊಯ್ಸಳರೊಂದಿಗೆ ಕುಟುಂಬದ ಸಂಬಂಧವು ಇನ್ನೂ ಗಾಢವಾಯಿತು.

## 4.4. ಗಂಗರಾಜ

ವಿಷ್ಣುವರ್ಧನನ ಆಳ್ವಿಕೆಯಲ್ಲಿ ಗಂಗರಾಜನು ಮಹಾದಂಡನಾಯಕರಲ್ಲಿ ಒಬ್ಬನಾಗಿದ್ದನು. ನೃಪಕಾಮನು ಆಳುತ್ತಿದ್ದಾಗ ಈತ ಓರ್ವ ದಳಪತಿಯಾಗಿದ್ದನು. ಈಚ ಗಂಗರಾಜನ ತಂದೆ ಯಾಗಿದ್ದನು. ತಾಯಿಯು ಪೂಚವ್ವೆ. ದಂಡನಾಯಕ ಬೊಮ್ಮ ಅವರ ಅಣ್ಣನಾಗಿದ್ದನು. ಗಂಗರಾಜನ ಪತ್ನಿಯ ಹೆಸರು ಲಕ್ಷ್ಮಿ ಮತ್ತು ಅವನಿಗೆ ಬೊಪ್ಪ ಎಂಬ ಹೆಸರಿನ ಮಗನಿದ್ದನು. ಗಂಗರಾಜನು ಗಂಗವಂಶಕ್ಕೆ ಸೇರಿದವನಾಗಿದ್ದನು. ಅವನು ಹೊಯ್ಸಳರಸ ವಿಷ್ಣುವರ್ಧನನ ಬಲಗೈಯಾಗಿದ್ದನು. ವಿಷ್ಣುವರ್ಧನನು ರಾಜನಾಗುವ ಮೊದಲಿನಿಂದಲೂ ಅವನು ವಿಷ್ಣುವರ್ಧನನಿಗೆ ಆಡಳಿತದಲ್ಲಿ ಸಹಾಯ ಮಾಡುತ್ತಿದ್ದನು. ವಿಷ್ಣುವರ್ಧನನು ರಾಜನಾದ ಮೇಲೆ ಗಂಗರಾಜನನ್ನು ದಂಡನಾಯಕ ನನ್ನಾಗಿ ನೇಮಿಸಿದನು.

ಗಂಗರಾಜನು ರಾಜನ ಪರವಾಗಿ, ತಲಕಾಡನ್ನು ಆಕ್ರಮಿಸಿದ ಚೋಳರ ವಿರುದ್ಧ ಹೋರಾಡಿ, ಅವರನ್ನು ಸೋಲಿಸಿದನು. ಈ ಯುದ್ಧದಲ್ಲಿ ಪರಾಕ್ರಮ ತೋರಿ ಧೈರ್ಯ, ಸಾಹಸಗಳಿಂದ ಹೋರಾಡಿದನು. ಇದರ ಬಗ್ಗೆ ನಮಗೆ ಶಿಲಾಶಾಸನಗಳಲ್ಲಿ ಅನೇಕ ವಿವರಗಳು ದೊರಕುತ್ತವೆ. ಅವನ ವಿಜಯವನ್ನು ಶಿಲಾಲಿಪಿಗಳು ಹಾಡಿ ಹೊಗಳುತ್ತವೆ. ಕೊಂಗು, ಚೆನ್ನಗಿರಿಗಳನ್ನು ಆಕ್ರಮಿಸಿ ಅವರುಗಳನ್ನು ಸೋಲಿಸಿದನು.

ಹೊಯ್ಸಳ ರಾಜ್ಯದ ವಿಸ್ತರಣೆಯಲ್ಲಿ ಗಂಗರಾಜನ ಪಾತ್ರವೇ ಹಿರಿದು. ಕಣ್ಣೇಗಾಲ ಯುದ್ಧದಲ್ಲಿ ಚಾಳುಕ್ಯರ ಸೈನ್ಯವೂ ಇವನಿಂದ ಸೋಲಿಸಲ್ಪಟ್ಟಿತು. ಹೊಯ್ಸಳ ಸಾಮ್ರಾಜ್ಯವು ಸ್ವತಂತ್ರ ವಾಯಿತು. ಗಂಗರಾಜನು ಕೀರ್ತಿಯ ಶಿಖರದಲ್ಲಿದ್ದನು ಮತ್ತು ಎಲ್ಲೆಡೆ ಹೆಚ್ಚು ಗೌರವಕ್ಕೆ ಪಾತ್ರನಾದನು.

ಇವನ ಬಿರುದುಗಳು ಸ್ವಾಮಿನಿಷ್ಟ, ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ದ್ರೋಹಗರ್ಘತ್ತ, ಸ್ವಾಮಿ ದ್ರೋಹಗರ್ಘತ್ತ ಈ ಬಿರುದುಗಳಿಂದ ದಂಡನಾಯಕನಾಗಿ, ಗಂಗರಾಜನು ಎಷ್ಟು ದೊಡ್ಡ ವ್ಯಕ್ತಿಯಾಗಿದ್ದನೆಂಬುದು ತಿಳಿದು ಬರುತ್ತದೆ.

ಗಂಗರಾಜನು ದಂಡನಾಯಕನು ಮಾತ್ರವಲ್ಲ, ಧಾರ್ಮಿಕ ವ್ಯಕ್ತಿಯೂ ಆಗಿದ್ದನು. ಅವನು ದೇವಾಲಯಗಳಿಗೆ ಮಹಾದಾನಿಯಾಗಿದ್ದನು. ಅನೇಕ ಶಿಲಾಲಿಪಿಗಳು ಇದಕ್ಕೆ ನಿದರ್ಶನಗಳಾಗಿವೆ. ಅವನು ಅನೇಕ ಯುದ್ಧಗಳಲ್ಲಿ ವಿಜಯಿಯಾದನು. ವಿಜಯದ ಮೇಲೆ ವಿಜಯಗಳನ್ನು ಪಡೆದಾಗಲೆಲ್ಲಾ ಅವನು ಶುಭಚಂದ್ರ ಸಿದ್ಧಾಂತ ದೇವನಿಗೆ ಕಾಣಿಕೆಗಳನ್ನು ನೀಡಿದನು. ಅನೇಕ ಜಿನ ಬಸದಿಗಳನ್ನು ಪುನಃ ನಿರ್ಮಿಸಿದನು. ಕಣ್ಣೇಗಾಲದ ವಿಜಯದ ನಂತರ ಅವನಿಗೆ ಪರಮ ಗ್ರಾಮವು ರಾಜನಿಂದ ಉಡುಗೊರೆಯಾಗಿ ಕೊಡಲ್ಪಟ್ಟಿತು. ಆದರೆ ಅದನ್ನು ಅವನು ತನ್ನ ತಾಯಿಗೆ ಕೊಟ್ಟನು. ಇವನ ಪತ್ನಿ ಲಕ್ಷ್ಮಿಯು ದೇವಾಲಯಗಳನ್ನು ಕಟ್ಟಿಸಿದಳು. ತಲಕಾಡಿನ ವಿಜಯಕ್ಕೆ ಮೊದಲು ಬಿಂದಿಗನವಿಲೆ ಗ್ರಾಮವು ಅವನ ಗುರುವಾದ ಯೋಗತೀರ್ಥರಿಗೆ ಕಾಣಿಕೆಯಾಗಿ ಕೊಡಲ್ಪಟ್ಟಿತು. ತಲಕಾಡಿನ ವಿಜಯದ ನಂತರ, ಗೋಮಟೇಶ್ವರನ ಪೂಜೆಗಾಗಿ, ಗೋವಿಂದವಾಡಿ ಗ್ರಾಮವು ಅವನಿಗೆ ಉಡುಗೊರೆಯಾಗಿ ದೊರಕಿತು. ಈ ಹಳ್ಳಿಯನ್ನು ಶ್ರವಣಬೆಳಗೊಳದಲ್ಲಿ ಉಂಬಳಿಯಾಗಿ ಕೊಡಲ್ಪಟ್ಟಿತು.

ಶ್ರವಣಬೆಳಗೊಳದ ಬಳಿ ಗಂಗರಾಜನಿಂದ ಜಿನನಾಥಪುರವು ಕಟ್ಟಲ್ಪಟ್ಟಿತು ಮತ್ತು ಅದಕ್ಕಾಗಿ ಅವನು ಅಪಾರವಾದ ಕಾಣಿಕೆಗಳನ್ನು ನೀಡಿದನು. ಅದರ ಬಳಿ ಬಸದಿಯೊಂದನ್ನು ಕಟ್ಟಿಸಿದನು. ತನ್ನ ಬಂಧುಗಳ ಮರಣಾನಂತರ, ಅವರ ನೆನಪಿಗಾಗಿ ಚೈತ್ಯ ಮಂಟಪಗಳನ್ನು ಕಟ್ಟಿಸಿದನು.

ಗಂಗರಾಜನು ಜಿನನ ಮಹಾಭಕ್ತನಾಗಿದ್ದನು. ಗಂಗ ರಾಜನು ಗಂಗಾವತಿಯ ಎಲ್ಲಾ ಬಸದಿಗಳನ್ನು ಅಥವಾ ಜೈನ ದೇವಾಲಯಗಳನ್ನು ನವೀಕರಣಗೊಳಿಸಿದನು. ಗಂಗಾವತಿಯ ಗೊಮ್ಮಟದೇವನ ಸುತ್ತ ಕಟ್ಟೆಯನ್ನು ಕಟ್ಟಿಸಿದನು. ತಿಗುಳರನ್ನು ಓಡಿಸಿ, ಗಂಗಾವತಿಯನ್ನು ವೀರಗಂಗನಿಗೇ ಹಿಂದಿರುಗಿಸಿದನು.

ಎಲ್ಲಿಯೇ ಸಾಗಲಿ, ಎಲ್ಲಿಯಾದರೂ ಬಿಡಾರ ಹೂಡಲಿ, ಎಲ್ಲಿಯೇ ಅವನ ದೃಷ್ಟಿ ತಾಗಲಿ, ಎಲ್ಲಿಯೇ ಆಗಲಿ ಅವನ ಮನಸ್ಸು ಆಕರ್ಷಿತವಾಯಿತೆಂದರೆ, ಅಲ್ಲೆಲ್ಲಾ ಶ್ರೀಮಂತ ಜೈನ ದೇವಾಲಯಗಳನ್ನು ಕಟ್ಟಿಸಿದನು. ಹೀಗೆ ದೇಶವು ಎಲ್ಲೆಡೆಯೂ ಪ್ರಾಚೀನ ಕಾಲದ ಉಚ್ಛ್ರಾಯ ಸ್ಥಿತಿಗೇ ಗಂಗರಾಜನಿಂದ ತೆರಲ್ಪಟ್ಟಿತು. ವಿಶಿಷ್ಟ ಜೈನ ಭಕ್ತ ಅತ್ತಿಮಬ್ಬರಸಿಯನ್ನು ಜಗತ್ತು ಅಷ್ಟು ಹಾಡಿ ಹೊಗಳುವ ಕಾರಣವೇನೆಂದರೆ ಗೋದಾವರಿ ಸಹ ಹರಿಯುವುದನ್ನು

ನಿಲ್ಲಿಸಿದಳು. ಈಗ ಕಾವೇರಿ ತುಂಬಿ ಹರಿದರೂ, ಅವನನ್ನು ಸುತ್ತುವರೆದಳಾದರೂ ಮತ್ತು ಮುಂದೆ ಬಂದಳಾದರೂ ಮುಖ್ಯ ಸೇನಾನಿ ಗಂಗರಾಜನನ್ನು ಸ್ಪರ್ಶಿಸಲಿಲ್ಲ.

ಮುಖ್ಯ ದಂಡನಾಯಕ ಗಂಗರಾಜ ಮತ್ತು ಅವನ ತಾಯಿ ಪೋಚಿಕಬ್ಬೆ ಅವನ ಪತ್ನಿ ಲಕ್ಷ್ಮಿ ಮತ್ತು ಅವನ ಅಣ್ಣನ ಮಡದಿ ಜಕ್ಕಮವ್ವೆ. ಈ ಮೂವರು ಮಹಿಳೆಯರೂ ಜಿನನ ಪೂರ್ಣ ಭಕ್ತೆಯರಾಗಿದ್ದರು. ಇಬ್ಬರೂ ಓರಗಿತ್ತಿಯರು ಸುಭಚಂದ್ರ ಸಿದ್ಧಾಂತ ದೇವನ ಶಿಷ್ಯೆಯರಾಗಿದ್ದರು. ಅವರ ಅತ್ತೆಯಾದ ಪೋಚಿಕಬ್ಬೆ ಬೆಳಗೊಳ ಮತ್ತು ಇತರ ಪವಿತ್ರ ಸ್ಥಳಗಳನ್ನೂ, ಅನೇಕ ಜಿನ ದೇವಾಲಯಗಳನ್ನು ಪೂಜಿಸುತ್ತಿದ್ದಳು. ಸೊಸೆಯೂ ಏನೂ ಹಿಂದೆ ಬೀಳಲಿಲ್ಲ. ಲಕ್ಷ್ಮಿಯು ಕ್ರಿ.ಶ. 1118ರಲ್ಲಿ ಒಂದು ಹೊಸ ಜಿನ ದೇವಾಲಯವನ್ನು ಕಟ್ಟಿದಾಗ, ಅವಳ ಓರಗಿತ್ತಿಯಾದ ಜಕ್ಕಮ್ಮವ್ವೆಯ ಸನೇಹಳ್ಳಿಯಲ್ಲಿ ಒಂದು ಬಸದಿಯನ್ನು ಕಟ್ಟಿಸಿ, ಜಿನನ ಪೂಜೆಗೆ ವ್ಯವಸ್ಥೆ ಗೊಳಿಸುವುದರ ಮೂಲಕ ತನ್ನ ಗಾಢವಾದ ಭಕ್ತಿಗೆ ಒಂದು ಸ್ಪಷ್ಟ ಅಭಿವ್ಯಕ್ತಿ ಕೊಟ್ಟಳು. ಬೃಹತ್ ಶಿಲೆಯೊಂದರ ಮೇಲೆ ಜಿನನ ಚಿತ್ರವನ್ನು ಕೆತ್ತಿಸಿ, ಅದನ್ನು ಜಿನನ ಪೂಜೆಗೇ ಅರ್ಪಿಸಿದಳು.

ಗಂಗರಾಜನು ಸುಭಚಂದ್ರ ಸಿದ್ಧಾಂತದೇವನ ಪಾದಗಳನ್ನು ತೊಳೆದು ಪರ್ಸ್ವದೇವ ಮತ್ತು ಕುಕ್ಕುಟೇಶ್ವರ ದೇವರುಗಳನ್ನು ನಿರ್ಮಿಸಿ, ಅವರ ಪೂಜೆಗಾಗಿ ಒಂದು ಗ್ರಾಮವನ್ನೇ ದಾನವಾಗಿ ನೀಡಿದನು. ಸುಭಚಂದ್ರದೇವನ ನಿಸಿದಯು ಗಂಗರಾಜನಿಂದ ಸ್ಥಾಪಿಸಲ್ಪಟ್ಟಿತು. ಅವನ ನಾದಿನಿಯಾದ ಚಿಕ್ಕಮಬ್ಬೆಯು ಜಿನನ ಪೂಜೆಗಾಗಿ ವ್ಯವಸ್ಥೆಗೊಳಿಸಿದಳು.

ಗಂಗರಾಜನ ಮಗನಾದ ಈಚನನು ತ್ರೈಲೋಕ್ಯರಂಜನನ ದೇವಾಲಯವನ್ನು ಕಟ್ಟಿಸಿದನೆಂದು ತೋರುತ್ತದೆ. ಇದು ಬೊಪ್ಪನ ಚೈತ್ಯಾಲಯ ಎಂಬುದಾಗಿಯೂ ಕರೆಯಲ್ಪಡುತ್ತಿದೆ.

ಗಂಗರಾಜನ ಪತ್ನಿಯಾದ ಲಕ್ಷ್ಮಿಯು ಸುಭಚಂದ್ರ ಸಿದ್ಧಾಂತ ದೇವನ ಶಿಷ್ಯನಾದ ಭೂಚನನ ನೆನಪಿಗಾಗಿ, ಒಂದು ಶಿಲಾಸ್ಥಂಭವನ್ನು ಸ್ಥಾಪಿಸಿದಳು.

ಕ್ರಿ.ಶ. 1174ರ ತಿಪ್ಪೂರು ಶಿಲಾಶಾಸನದ ಪ್ರಕಾರ ದಂಡನಾಯಕನಾದ ಗಂಗರಾಜನು ರಾಜನಿಂದ ಉಡುಗೊರೆಯಾಗಿ ಪಡೆದ ಗ್ರಾಮವನ್ನು ತನ್ನ ಧರ್ಮಗುರುಗಳಾದ ಮೂಲಸಂಘದ ಮೇಘಚಂದ್ರ ಸಿದ್ಧಾಂತರಿಗೆ ಮತ್ತು ಕಾಮುಗಾನ ಮತ್ತು ತಿಂತ್ರಿನಿಕಾಗಚ್ಛರಿಗೆ ಅರ್ಪಿಸಿದನು.

ಗಂಗರಾಜನ ಕುಟುಂಬವು ಜೈನ ಧರ್ಮಕ್ಕೆ ಸಂಪೂರ್ಣವಾಗಿ ಅರ್ಪಿತವಾಗಿತ್ತು. ಗಂಗರಾಜನ ಕುಟುಂಬದ ಮಹಿಳೆಯರೂ ಸಹ ಜೈನ ಧರ್ಮಕ್ಕೆ ಅರ್ಪಿತರಾಗಿದ್ದರು. ಅವರೂ ಸಹ ಜೈನ ಧರ್ಮಕ್ಕೆ ಉದಾರವಾಗಿ ಧನಸಹಾಯ ನೀಡಿದ್ದರು.

ಗಂಗರಾಜನು ಧರ್ಮ ಪರಾಯಣನಾಗಿದ್ದನು. ಒಬ್ಬ ಧಾರ್ಮಿಕ ಮನುಷ್ಯ ಸತ್ಯಸಂಧ ಮತ್ತು ಮಹಾದಾನಿ ಗಂಗರಾಜನು ಒಬ್ಬ ಜೈನನಾಗಿದ್ದನೆಂಬುದು ಸ್ವಾರಸ್ಯಕರ ಸಂಗತಿ. ಧಾರ್ಮಿಕ ಸಂಬಂಧದಿಂದ ಅವನನ್ನು ಜಿನ ಸಮಯ ಸಮುಧಾರಣ ಪರಿಶದೇವ ಪದಾರಾಧಕ ಎಂದು ಬಣ್ಣಿಸಲಾಗಿದೆ.

ಗಂಗರಾಜನು ಕ್ರಿ.ಶ. 1173ರಲ್ಲಿ ಮರಣ ಹೊಂದಿದನು. ಅವನ ನೆನಪಿಗಾಗಿ ಅವನ ಮಗನಾದ ಬೊಪ್ಪನು, ದ್ರೋಹಗರಗಟ್ ಒಂದು ಜಿನಾಲಯವನ್ನು ಅಂದರೆ ಪಾರ್ಶ್ವನಾಥ ಬಸದಿಯನ್ನು ಹಳೇಬೀಡಿನಲ್ಲಿ ಕಟ್ಟಿಸಿದನು. ಹೀಗೆ ಗಂಗರಾಜನು ವಿಷ್ಣುವರ್ಧನನ ಆಳ್ವಿಕೆಯಲ್ಲಿ ಅತ್ಯಂತ ಪ್ರಮುಖ ಸೇನಾನಿಗಳಲ್ಲಿ ಒಬ್ಬನಾಗಿದ್ದನು. ವಿಷ್ಣುವರ್ಧನನ ಆಳ್ವಿಕೆಯಲ್ಲಿ ಹೊಯ್ಸಳ ರಾಜ್ಯದ ವಿಸ್ತರಣೆಗೆ ಅವನೇ ಪ್ರಮುಖ ಕಾರಣಕರ್ತನಾಗಿದ್ದನು.

### 4.5 ಪುನಿಸಮ್ಮಯ್ಯ

ಪುನಿಸಮ್ಮಯ್ಯನು ಹೊಯ್ಸಳರಸ ವಿಷ್ಣುವರ್ಧನನ ದಂಡನಾಯಕನಾಗಿದ್ದನು. ಇವನು ಪ್ರಸಿದ್ಧನಾದ ಸೇನಾಧಿಪತಿಯಾಗಿದ್ದನು. ಇವನು ರಾಜ ವಿಷ್ಣುವರ್ಧನನ ಜೊತೆಗೂಡಿ ಯುದ್ಧ ಭೂಮಿಗೆ ಹೋಗುತ್ತಿದ್ದನು. ಮಹಾ ಸಾಮಂತಾಧಿಪತಿ, ಮಹಾದಂಡನಾಯಕ ಇತ್ಯಾದಿ ಇವನ ಬಿರುದುಗಳು. ಇವನು ಪ್ರಸಿದ್ಧನಾದ ಸೇನಾನಿಯಾಗಿದ್ದನಲ್ಲದೆ, ಧಾರ್ಮಿಕ ಮನುಷ್ಯನೂ ಆಗಿದ್ದನು. ಅಲ್ಲದೆ ದೊಡ್ಡ ಜೈನ ಭಕ್ತನಾಗಿದ್ದನು.

ಕ್ರಿ.ಶ. 1116-17ರ ಶಿಲಾಶಾಸನವೊಂದು ವೀರಗಂಗ ವಿಷ್ಣುವರ್ಧನ ಬಿಲ್ಲಿಗ ಹೊಯ್ಸಳ ದೇವನ ಆಳ್ವಿಕೆಯ ಬಗ್ಗೆ ತಿಳಿಸುತ್ತದೆ. ಇವನಿಗೆ 'ತಲಕಾಡುಗೊಂಡ' ಎಂಬ ಬಿರುದಿತ್ತು. ಇದರಿಂದ ಆ ವೇಳೆಗಾಗಲೇ ತಲಕಾಡು ಪ್ರದೇಶವನ್ನು ಜಯಪ್ರದವಾಗಿ ವಿಷ್ಣುವರ್ಧನನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದನೆಂಬುದು ತಿಳಿದು ಬರುತ್ತದೆ. ಇದೇ ಶಾಸನದಲ್ಲಿ ದಂಡನಾಯಕ ಪುನಿಸಮಯ್ಯನ ಹೆಸರೂ ಕಂಡುಬರುತ್ತದೆ. ಈತನು ಕರೆಕಾಂತಜೀಯನಿಗೆ, ದೇವದಾನಕ್ಕಾಗಿ, ಭೂಮಿಯನ್ನು ದಾನವಾಗಿ ಕೊಟ್ಟಿರುವ ಉಲ್ಲೇಖವಿದೆ. ದಾನಿಗಳಲ್ಲಿ ಒಬ್ಬನೆಂದು ಅವನ ಹೆಸರನ್ನು ದಾಖಲಿಸಲಾಗಿದೆ. ಇದು ಸ್ಪಷ್ಟವಾಗಿ ಶಿವಾಲಯಕ್ಕೆ ಕೊಟ್ಟಿರುವ ಒಂದು ಕೊಡುಗೆಯಾಗಿದ್ದು, ಹೊಯ್ಸಳರಸರ ಆಳ್ವಿಕೆಯಲ್ಲಿ ಸೇನಾಧಿಪತಿಗಳೂ ಸಹ ಅನ್ಯಮತ ಸಹಿಷ್ಣುತೆಯ ಒಂದು ಉದಾತ್ತ ನೀತಿಯನ್ನು ಹೇಗೆ ಮೆರೆಯುತ್ತಿದ್ದರೆಂಬುದಕ್ಕೆ ಉತ್ತಮ ನಿದರ್ಶನವಾಗಿದೆ.

ವಿಷ್ಣುವರ್ಧನನ ಆಳ್ವಿಕೆಯಲ್ಲಿ ಪುನಿಸಮಯ್ಯನು ಯುದ್ಧ ಮತ್ತು ಶಾಂತಿಗಾಗಿ ಮಂತ್ರಿಯಾಗಿದ್ದನು. ಅವನು ಶ್ರವಣಬೆಳಗೊಳದಲ್ಲಿ ಬಸದಿಯ ಉತ್ತರ ಭಾಗದಲ್ಲಿ ಕೆರೆಯ ಕೆಳಗಡೆ, ಒಂದು ಖಂಡುಗ ಖುಷ್ಕಿ ಭೂಮಿಯನ್ನು ದಾನವಾಗಿ ಕೊಟ್ಟನು.

ಪುನಿಸಮಯ್ಯನ ಪತ್ನಿಯಾದ ಜಕ್ಕಿಯಬ್ಬೆಯು ಕ್ರಿ.ಶ. 1117ರಲ್ಲಿ ಬಸ್ತಿ ಹೊಸಕೋಟೆಯಲ್ಲಿ ಒಂದು ಕಲ್ಲಿನ ಬಸದಿಯನ್ನು ಕಟ್ಟಿಸಿದಳು. ಪುನಿಸಮಯ್ಯ ಬಸದಿಯನ್ನು ಕಟ್ಟಿಸಲು ಕಾರಣಕರ್ತ ನಾದನಲ್ಲದೆ, ನಾಡಿನ ಮಾವಿನಕೆರೆ ಮತ್ತು ಮಣಿಕದೊಡಲೂರಿನ ಭಾಗಗಳನ್ನು ಎಲ್ಲಾ ತೆರಿಗೆಗಳಿಂದ ಮುಕ್ತಗೊಳಿಸಿದನು.

ಹೊಯ್ಸಳ ಪ್ರಭು ವಿಷ್ಣುವರ್ಧನನ ಆಳ್ವಿಕೆಯಲ್ಲಿ ಆಡಳಿತದ ವಿವಿಧ ಹಂತಗಳಲ್ಲಿ ಸಂಬಂಧ ಪಟ್ಟಂತೆ ಹೊಯ್ಸಳ ವಿವಿಧ ಶಿಲಾಶಾಸನಗಳಲ್ಲಿ ಸಂಗ್ರಹಿತವಾದ ದಂಡನಾಯಕರ ಹೆಸರುಗಳು ಈ ಕೆಳಕಂಡಂತಿವೆ.

# ಅಧ್ಯಾಯ 5
# ಹೊಯ್ಸಳರ ರಾಜಕೀಯ/ರಾಜಪ್ರಭುತ್ವದಲ್ಲಿ ದಂಡನಾಯಕರ ಪಾತ್ರ

ಶಿಲಾಶಾಸನಗಳು ಆ ಕಾಲದ ಆಡಳಿತದ ಬಗ್ಗೆ ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ. ಸಾಮಾನ್ಯವಾಗಿ ಆಡಳಿತವು ಹಿಂದಿನ ರೀತಿಯಲ್ಲೇ ಮುಂದುವರಿಕೆ ಆಗಿತ್ತು. ಸಮರ್ಥ ಮಂತ್ರಿಗಳ ಮತ್ತು ಇತರ ಅಧಿಕಾರಿಗಳ ನೆರವಿನಿಂದ ಒಂದು ಸುಸಂಘಟಿತವಾದ ಸರಕಾರದ ಪದ್ಧತಿಯೇ ಜಾರಿಯಲ್ಲಿತ್ತು. ಜನರು ಶಾಂತಿ ಮತ್ತು ಸುವ್ಯವಸ್ಥೆಯ ಆಶೀರ್ವಚನದ ಸಂತೋಷವನ್ನು ಅನುಭವಿಸುತ್ತಿದ್ದರು. ದರೋಡೆಕೋರರಿಂದ ಮತ್ತು ಶತ್ರುಗಳಿಂದ ತಮ್ಮನ್ನು ರಕ್ಷಿಸಬಲ್ಲ ರಾಜನ ಬಲಶಾಲಿಯಾದ ಒಂದು ಸರಕಾರದ ಅಗತ್ಯದ ಬಗ್ಗೆ ಜನರ ಭಾವನೆ ಇತ್ತು. ಹೇಗೆ ಗ್ರಾಮೀಣ ಜನರ ಜೀವನವು ದೇವಾಲಯಗಳ ಸುತ್ತ ವಿಕಸಿತವಾಗಿತ್ತೋ, ಹಾಗೆಯೇ ರಾಜ್ಯದ ಜನರ ಜೀವನವು ಬಹುಮಟ್ಟಿಗೆ ರಾಜನನ್ನೇ ಅವಲಂಬಿಸಿತ್ತು. ದೇಶದಲ್ಲಿ ಸಾಮಾಜಿಕ ಸುವ್ಯವಸ್ಥೆ ಕಾಪಾಡಲು ಮತ್ತು ಜನರಲ್ಲಿ ಸಾಮಾಜಿಕ ಕ್ಷೇಮಾಭ್ಯುದಯವನ್ನು ಹೆಚ್ಚಿಸಲು ರಾಜಪ್ರಭುತ್ವದಂತಹ ಸಂಸ್ಥೆಯೊಂದೇ ಬಹಳ ಅಗತ್ಯವಾಗಿ ಮತ್ತು ಉಪಯುಕ್ತವಾಗಿ ಕಂಡಿತು. ಏಕೆಂದರೆ ಅದು ಜನರ ಒಮ್ಮತದ ಸಂಕೇತವಾಗಿ ಮತ್ತು ಏಕತೆಯ ಕುರುಹಾಗಿ ನಿಂತಿತ್ತು.

## 5.1 ರಾಜ

ರಾಜನು ರಾಜ್ಯದ ಪರಮಾಧಿಕಾರಿ ಎಲ್ಲಾ ವಿಷಯಗಳಲ್ಲಿಯೂ ಅವನದೇ ಪರಮಾಧಿಕಾರ. ರಾಜನೇ ಆಡಳಿತದ ಮುಖ್ಯ ಚಾಲಕ ಮತ್ತು ಬಲ ಹಾಗೂ ಸರಕಾರವು ಬಹುಮಟ್ಟಿಗೆ ಅವನ ವ್ಯಕ್ತಿತ್ವವನ್ನೇ ಅವಲಂಬಿಸಿತ್ತು. ರಾಜನ ಮುಖ್ಯ ಕರ್ತವ್ಯಗಳೆಂದರೆ, ರಾಜ್ಯಕ್ಕೆ ರಕ್ಷಣೆ ನೀಡುವುದು, ನ್ಯಾಯ ಪರಿಪಾಲನೆ ಮತ್ತು ರಾಜ್ಯದಲ್ಲಿ ಸಾಮಾಜಿಕ ವ್ಯವಸ್ಥೆಯನ್ನು ರಕ್ಷಿಸುವುದು ಇವೇ ಆಗಿದ್ದುವು. ಸಾಮಾಜಿಕ ಸಂಘಟನೆಯ ಅತ್ಯಗತ್ಯ ಆಧಾರವೆನಿಸಿದ್ದ ಸಾಮಾಜಿಕ ವ್ಯವಸ್ಥೆ ಧರ್ಮವನ್ನು ರಕ್ಷಿಸುವುದು ಈ ಧರ್ಮರಕ್ಷಣೆಯಿಂದ ಜನರಿಗೆ ಭದ್ರತೆಯನ್ನು ಒದಗಿಸುವುದು ಇದೇ ರಾಜನ ಮುಖ್ಯ ಕರ್ತವ್ಯವಾಗಿತ್ತು. ರಾಜನು ಆಡಳಿತದ ವಿಷಯಗಳಲ್ಲಿ ಮಂತ್ರಿಮಂಡಲದೊಂದಿಗೆ ಸಮಾಲೋಚನೆ ನಡೆಸುತ್ತಿದ್ದನು. ಆಸ್ತಿಯ ಒಡೆತನದ ಮೇಲಿನ ವಿವಾದಗಳನ್ನು ರಾಜನೇ ಖುದ್ದಾಗಿ ಬಗೆಹರಿಸುತ್ತಿದ್ದನು. ಅವನು ತನ್ನ ಹೆಸರಿನಲ್ಲಿಯೇ ನಾಣ್ಯಗಳನ್ನು ಹೊರಡಿಸುತ್ತಿದ್ದನು. ಸೈನಿಕ ಚಟುವಟಿಕೆಗಳಲ್ಲಿಯೂ ಅವನಿಗೆ ಹೆಚ್ಚಿನ ಪ್ರಾಮುಖ್ಯತೆ ಇತ್ತು. ಯುದ್ಧದ ಸಮಯದಲ್ಲಿ ಸೈನ್ಯದ ಮುಂದಾಳುವಾಗಿರುತ್ತಿದ್ದನು.

ಉತ್ತರಾಧಿಕಾರಿತ್ವವು ವಂಶಪಾರಂಪರ್ಯವಾಗಿರುತ್ತಿದ್ದುದು ಅಂದಿನ ದಿನಗಳಲ್ಲಿ ಸಾಮಾನ್ಯ ಪದ್ಧತಿಯಾಗಿತ್ತು. ಎಲ್ಲಾ ವಿಷಯಗಳಲ್ಲಿಯೂ ರಾಜನದೇ ಸಾರ್ವಭೌಮತ್ವವಾಗಿತ್ತು. ತನ್ನ ಸೈನ್ಯ ಬಲವನ್ನು ಗಮನಿಸುವುದು ರಾಜನ ಅತಿ ಪ್ರಮುಖ ಕರ್ತವ್ಯಗಳಲ್ಲಿ ಒಂದಾಗಿತ್ತು. ಬಿಕ್ಕಟ್ಟಿನ ಸಮಯದಲ್ಲಿ ತಾನೇ ಖುದ್ದಾಗಿ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದನಲ್ಲದೆ, ತನ್ನ ಪರವಾಗಿ ಧೈರ್ಯ ಸಾಹಸಗಳಿಂದ ಹೋರಾಡಿದವರಿಗೆ ಉದಾರವಾಗಿ ದಾನ ಮಾಡುತ್ತಿದ್ದನು. ರಾಜನು ಎಲ್ಲ ಮತ ಧರ್ಮಗಳ ರಕ್ಷಕನಾಗಿದ್ದನು. ಕಾನೂನು ಮತ್ತು ನ್ಯಾಯದ ವಿಷಯಗಳಲ್ಲಿ ರಾಜನು ಸಕ್ರಿಯವಾಗಿ ಆಸಕ್ತಿ ವಹಿಸುತ್ತಿದ್ದನು. ರಾಜನು ತನ್ನ ರಾಜ್ಯದ ಉದ್ದಗಲಕ್ಕೂ ದೀರ್ಘವಾದ ಪರ್ಯಟನೆಯನ್ನು ಕೈಗೊಳ್ಳುತ್ತಿದ್ದನು. ತನ್ನ ಅಧಿಕಾರದ ಅಖಂಡತೆಯನ್ನು ಸಾಧಿಸುವುದು ಇದರ ಹಿಂದಿನ ಮುಖ್ಯ ಉದ್ದೇಶವಾಗಿತ್ತು.

ವಿಷ್ಣುವರ್ಧನನು ವಿಶಾಲವಾದ ಭೂಪ್ರದೇಶವನ್ನು ಹೊಂದಿದ್ದನು ಮತ್ತು ಪ್ರಥಮ ರಾಜನೆಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದನು. ಆದರೆ ಅದು ಅಷ್ಟು ದೊಡ್ಡ ರಾಜ್ಯವು ಶಾಂತಿ ಮತ್ತು ಸಾಮರಸ್ಯ ಕಾಯ್ದುಕೊಳ್ಳಲು ಒಂದು ಬಲವಾದ ಸಂಘಟನೆಯನ್ನು ಬಯಸುತ್ತಿತ್ತು. ಪ್ರಾಚೀನ ನೀತಿ ಸಂಹಿತೆಯಂತೆ ಒಬ್ಬ ಹಿಂದೂ ರಾಜನ ಕರ್ತವ್ಯವೆಂದರೆ, "ಆಳುವುದು ತನ್ನದೇ ಆದ ವೈಭವಕ್ಕಾಗಿ ಅಲ್ಲ, ಆದರೆ ಅದು ತನ್ನ ಪ್ರಜೆಗಳ ಶಾಂತಿಗಾಗಿ, ದುಷ್ಟರ ದಮನಕ್ಕಾಗಿ ಮತ್ತು ಶಿಷ್ಯರ ರಕ್ಷಣೆಗಾಗಿ" ಹೊಯ್ಸಳರಸರ ಧ್ಯೇಯವೂ ಇದೇ ಆಗಿತ್ತು. ಆದರೆ ವಿಷ್ಣುವರ್ಧನನು ಒಂದು ವಿಚಿತ್ರ ಪರಿಸ್ಥಿತಿಯಲ್ಲಿದ್ದನು. ತನ್ನ ಆಳ್ವಿಕೆಯ ಕಾಲದಲ್ಲೆಲ್ಲಾ ಸಮರೋತ್ಸಾಹದಲ್ಲೇ ಮತ್ತು ಗೆದ್ದ ಭೂಭಾಗಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವುದರಲ್ಲಿಯೇ ನಿರತನಾಗಿದ್ದನು. ಈ ಉದ್ದೇಶದಿಂದಲೇ ಅವನು ತಲಕಾಡು, ಯಾದವಪುರ ಮತ್ತು ಬಂಕಾಪುರ ಮೊದಲಾದ ಸ್ಥಳಗಳಲ್ಲಿ ವಾಸಿಸುತ್ತಿದ್ದನು. ಆದುದರಿಂದ, ಅವನ ರಾಜ್ಯವು ಅನೇಕ ಭೂಪ್ರದೇಶಗಳಲ್ಲಿ ಹಂಚಿಹೋಗಿದ್ದು, ಪ್ರತಿಯೊಂದು ಭಾಗವು ಒಬ್ಬ ದಂಡನಾಯಕ ಅಥವಾ ಒಬ್ಬ ರಾಣಿಯ ಅಧೀನದಲ್ಲಿರುವುದನ್ನು ಕಾಣುತ್ತೇವೆ.

## 5.2 ಯುವರಾಜ

ಯುವರಾಜನ ಸ್ಥಾನವೂ ಬಹುಮುಖ್ಯವಾಗಿದ್ದಿತು. ಹಿರಿಯ ಮಗನನ್ನೇ ಯುವರಾಜನೆಂದು ನೇಮಿಸುವುದೇ ಆಗಿನ ಪದ್ಧತಿಯಾಗಿತ್ತು. ಅವನು ಆಡಳಿತವನ್ನು ನಡೆಸುವುದರಲ್ಲಿ ಯಾವಾಗಲೂ ರಾಜನೊಂದಿಗೇ ಇರುತ್ತಿದ್ದನು. ರಾಜನ ಪರವಾಗಿ ಯುವರಾಜನೂ ವಿಜಯ ಯಾತ್ರೆಗಳಲ್ಲಿ ಭಾಗವಹಿಸುತ್ತಿದ್ದನು. ತನ್ನ ಸಹೋದರನ ಕಾಲದಲ್ಲಿ ವಿಷ್ಣುವರ್ಧನನು ಗಂಗವಾಡಿಯ ರಾಜ್ಯಪಾಲ ನಾಗಿದ್ದನು. ಆಗ ಇನ್ನೂ ಚೋಳರ ಹಿಡಿತದಲ್ಲಿದ್ದ ಗಂಗವಾಡಿಯ ಭಾಗಗಳನ್ನು ಸ್ವತಂತ್ರಗೊಳಿಸಲು ಗಂಭೀರ ಪ್ರಯತ್ನಗಳನ್ನು ಮಾಡಿದರು. ಯುವರಾಜನಾಗಿದ್ದಾಗ, ತನ್ನ ಸಹೋದರ ಮೊದಲನೇ ಬಲ್ಲಾಳನ

ಜೊತೆಯಲ್ಲಿದ್ದನು. ಆಗ ಅವನಿಗೆ ಅಗತ್ಯವಿದ್ದ ರಾಜಕೀಯ ತರಬೇತಿಯು ದೊರೆಯಿತು. ಕ್ರಿ.ಶ. 1102 ರಲ್ಲಿ ಅವನು ತುಮಕೂರನ್ನು ಆಳುತ್ತಿದ್ದನು.

## 5.3 ರಾಣಿಯರು

ಹೊಯ್ಸಳ ಆಳ್ವಿಕೆಯಲ್ಲಿ ಆಡಳಿತದಲ್ಲಿ ರಾಜರೊಂದಿಗೆ ರಾಣಿಯರೂ ತಮ್ಮನ್ನು ತೊಡಗಿಸಿ ಕೊಂಡಿರುವುದನ್ನು ಕಾಣುತ್ತೇವೆ. ವಿಷ್ಣುವರ್ಧನನಿಗೆ ಅನೇಕ ಪತ್ನಿಯರಿದ್ದರು. ಅವರಲ್ಲಿ ಹೆಚ್ಚು ಖ್ಯಾತಳಾದವಳೆಂದರೆ ಹಿರಿಯ ರಾಣಿ ಶಾಂತಲಾದೇವಿ. ಕಿರಿಯ ಶಾಂತಲಾದೇವಿ, ಬೊಮ್ಮಲಾದೇವಿ, ರಜಲಾದೇವಿ, ಲಕ್ಷ್ಮೀದೇವಿ ಮತ್ತು ದೇವಕಿದೇವಿ ಇತರ ಪತ್ನಿಯರು. ವಿಷ್ಣುವರ್ಧನನ ಹಿರಿಯ ರಾಣಿ ಶಾಂತಲಾದೇವಿ ರಾಜನ ಪಟ್ಟದರಸಿಯಾಗಿದ್ದಳು. ವಿಷ್ಣುವರ್ಧನನ ರಾಣಿಯರಲ್ಲೆಲ್ಲಾ ಬಹು ಮುಖ್ಯಳಾಗಿದ್ದ ಬೊಮ್ಮಲಾದೇವಿ ಸಾರ್ವಜನಿಕ ಜೀವನದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಳು. ಶಿವಗಂಗೆಯಲ್ಲಿ ಶಾಂತಲಾದೇವಿಯು ಮರಣವನ್ನಪ್ಪಿದ ಕೂಡಲೇ ಬೊಮ್ಮಲಾದೇವಿಯು ಪಟ್ಟದರಸಿಯಾದಳು. ಕ್ರಿ.ಶ. 1136ರಿಂದ ಆಕೆಯು ದೇಶದ ಆಡಳಿತದಲ್ಲಿ ರಾಜನಿಗೆ ಮುಖ್ಯವಾದ ಸಹವರ್ತಿಯಾದಳು. ಕ್ರಿ.ಶ. 1136 ಮತ್ತು ಕ್ರಿ.ಶ. 1138 ರಲ್ಲಿ ಆಕೆಯು ಅಸಂದಿ ಐನೂರು ಮತ್ತು ನೀರ್‌ಗುಂದವನ್ನು ಆಳುತ್ತಿದ್ದಳು ಮತ್ತು ಅವಳ ಕೈಕೆಳಗೆ ದೊಡ್ಡ ಪಾಳೆಯಗಾರರಾದ ನಲಪ್ರಭು, ಈರಕ ಗೋವಿಂದ, ಕಿಸ್ತೂರರನ್ನು ಮತ್ತು ಹರುವನಹಳ್ಳಿಯನ್ನು ಆಳುತ್ತಿದ್ದರು. ಕ್ರಿ.ಶ. 1139ರ ಶಿಲಾ ಶಾಸನವೊಂದು ತಿಳಿಸುವಂತೆ, ಬೊಮ್ಮಲಾದೇವಿಯು ರಾಜಮನೆತನದ ಕುದುರೆ ಸವಾರಿಯ ಶಾಲೆಯೊಂದಿತ್ತು. ಅದರಲ್ಲಿ ಅನಂತಪಾಲನೆಂಬುವನು ಸಹಾನಿ ಅಥವಾ ತರಪೇತುದಾರನಾಗಿದ್ದನು. ಇದು ಅಶ್ವದಳದಲ್ಲಿಯೂ ಮತ್ತು ಕುದುರೆ ಸವಾರಿಯಲ್ಲಿಯೂ ಅವಳಲ್ಲಿದ್ದ ಅತೀವ ಆಸಕ್ತಿಯನ್ನು ತೋರಿಸುತ್ತದೆ. ಹೀಗೆ, ವಿಷ್ಣುವರ್ಧನನ ರಾಣಿಯರು ಈ ಕಾಲದಲ್ಲಿ ಬಹುಮುಖ್ಯ ಸ್ಥಾನವನ್ನು ಪಡೆದಿದ್ದರು. ಹೊಯ್ಸಳರಸಿಯರು ಮತಧರ್ಮಕ್ಕೆ ನೀಡುತ್ತಿದ್ದ ಪ್ರೋತ್ಸಾಹವಲ್ಲದೆ, ಆಡಳಿತ ದಲ್ಲಿಯೂ, ಸಾಕಷ್ಟು ರಾಜಕೀಯ ಪ್ರಭಾವವನ್ನು ಬೀರುತ್ತಿದ್ದರು. ಹಿರಿಯ ರಾಣಿಯು ಯಾವಾಗಲೂ ರಾಜನ ಜೊತೆಗೂಡಿ ನಡೆದು ಆಸ್ಥಾನದಲ್ಲಿ ಅವನ ಮಗ್ಗುಲಲ್ಲೇ ಆಸೀನಳಾಗಿ, ಸಾರ್ವಜನಿಕ ಸಮಾರಂಭಗಳಲ್ಲಿ ಅವನೊಂದಿಗೆ ಭಾಗವಹಿಸುತ್ತಿದ್ದಳು.

## 5.4 ಮಂತ್ರಿಗಳು

ಸಾಮ್ರಾಜ್ಯದ ಆಡಳಿತವು ಅಷ್ಟು ಸರಳವಾದ ವಿಚಾರವಾಗಿರಲಿಲ್ಲ. ಅದಕ್ಕೆ ಅನೇಕ ಇಲಾಖೆಗಳ ಮತ್ತು ಅದನ್ನು ನೋಡಿಕೊಳ್ಳುವ, ಅದಕ್ಕೆ ಸಂಬಂಧಪಟ್ಟ ಅಧಿಕಾರಿಯ ಅಗತ್ಯವಿತ್ತು. ಸಾಮ್ರಾಜ್ಯದ ಶಾಂತಿ ಮತ್ತು ಸಮೃದ್ಧಿಯು ಹೆಚ್ಚಿಗೆ ಮಂತ್ರಿಮಂಡಲದ ಸಾಮರ್ಥ್ಯವನ್ನೇ ಅವಲಂಬಿಸಿತ್ತು.

ಬಹು ಮುಖ್ಯವಾದ ಮತ್ತು ಪದೇ ಪದೇ ತಿಳಿದು ಬರುವ ಕಾರ್ಯಾಲಯವೆಂದರೆ ಮಹಾಪ್ರಧಾನರದು ಸಾಮಾನ್ಯವಾಗಿ ಒಂದು ಪ್ರಾಂತ್ಯದ ಉಸ್ತುವಾರಿ ಇವರದು. ಸಾಮಾನ್ಯವಾಗಿ, ಪ್ರಧಾನರಾಗಿ ಅವರ ಕರ್ತವ್ಯಗಳ ಜೊತೆಗೆ, ಅನೇಕ ವೇಳೆ ಅವರಿಗೆ ಬೇರೆ ಬೇರೆ ಇಲಾಖೆಗಳನ್ನು ಕೊಡಲಾಗಿದ್ದು ಒಬ್ಬ ಅಧಿಕಾರಿಯು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಇಲಾಖೆಗಳನ್ನು ಹೊಂದಿರುವುದು ಕಂಡುಬರುತ್ತದೆ. ಮಹಾಪ್ರಧಾನರ ಹುದ್ದೆಯ ನೇಮಕಾತಿಯು ಅನುವಂಶೀಯ ವಾಗಿತ್ತು. ಹೀಗೆ, ಪೆರುಮಳ ದಂಡನಾಯಕನ ನಂತರ, ಅವನ ಉತ್ತರಾಧಿಕಾರಿಯನ್ನಾಗಿ ಅವನ ಮಗನಾದ ಮಾಧವ ದಂಡನಾಯಕನನ್ನೇ ನೇಮಿಸಲಾಗಿತ್ತು. ಮಹಾಪ್ರಧಾನರಿಗೆ ಹೆಚ್ಚು ಸಂಖ್ಯೆಯ ಅಧಿಕಾರಿಗಳು ನೆರವು ನೀಡುತ್ತಿದ್ದರು.

'ಸರ್ವಾಧಿಕಾರ' ಎಂಬುದು ಮತ್ತೊಂದು ಬಹುಮುಖ್ಯವಾದ ಇಲಾಖೆಯಾಗಿತ್ತು. ಈ ಅಧಿಕಾರಿಗೆ ವಹಿಸಲಾದ ಕೆಲಸದ ಖಚಿತ ಸ್ವರೂಪದ ಬಗ್ಗೆ ತಿಳಿದುಬಂದಿಲ್ಲ. ಅವನು ಬಹುಮುಖ್ಯವಾದ ಅಧಿಕಾರಿಯೇ ಆಗಿರಬೇಕು. ಸಮಿತಿಯಲ್ಲಿ ಅವನು ವಕ್ತಾರನಿರಬಹುದು. ಇತರರು ಕೇವಲ ಅವನ ಸಹೋದ್ಯೋಗಿಗಳಾಗಿದ್ದಿರಬಹುದು. ಎಲ್ಲಾ ಇಲಾಖೆಗಳಲ್ಲಿಯೂ ಅವನ ಪಾತ್ರವು ಮುಖ್ಯವಾಗಿತ್ತು.

ಸೈನಿಕ ಕರ್ತವ್ಯಗಳಿಗೆ ಸಂಬಂಧಿಸಿದಂತೆ 'ಸೇನಾಪತಿ' ಮತ್ತೊಂದು ವಿಭಾಗವಾಗಿತ್ತು. ಸೇನಾಪತಿಗೆ ಇತರ ಹೆಸರುಗಳೂ ಇದ್ದವು. ಸೇನಾಧಿಪತಿ, ಸೇನಾಧಿಪ ಮೊದಲಾದವು. ರಾಜನ ಸೈನ್ಯದಲ್ಲಿ ಅಧಿಕಾರಿಗಳಾಗಿ ಸೇವೆ ಸಲ್ಲಿಸಲು, ಪಾಳೆಯಗಾರರಿಗೂ, ಅವಕಾಶಕೊಟ್ಟು ಪ್ರೋತ್ಸಾಹಿಸ ಲಾಗುತ್ತಿತ್ತು. ಜಿಲ್ಲೆಯೊಂದರಲ್ಲಿ ದಂಡನಾಯಕ ಬಹುಮುಖ್ಯವಾದ ಮತ್ತು ಅತ್ಯಂತ ಉನ್ನತವಾದ ಅಧಿಕಾರಿಯಾಗಿದ್ದನು.

ಶಿಲಾಶಾಸನಗಳಲ್ಲಿ ಆಗಾಗ್ಗೆ ತಿಳಿಸಿರುವ ಮತ್ತೋರ್ವ ಅಧಿಕಾರಿಯ ಹೆಸರೆಂದರೆ 'ಮಹಾಸಾವಂತಾಧಿಪತಿ'. 'ಸಾವಂತ' ಎಂದರೆ ಒಬ್ಬ ಪಾಳೆಯಗಾರ ಮತ್ತು ಸಹಜವಾಗಿಯೇ ಸಾಮಂತಾಧಿಪತಿ ಎಂದರೆ, ಸಾಮಂತರನ್ನು ಆಳಲು ರಾಜನಿಂದ ನೇಮಿಸಲ್ಪಟ್ಟ ಅಧಿಕಾರಿ. ಈ ಅಧಿಕಾರಿಗಳಿಗೆ ವಹಿಸಲಾದ ಕಾರ್ಯಗಳೆಂದರೆ ರಾಜನಿಗೆ ಬರಬೇಕಾದ ಬಾಕಿ ಪೆರ್ಜುಂಕ, ವಡ್ಡರಾವುಲ, ಮತ್ತು ಬಿಲ್‌ಕಂಡ್ ಇವುಗಳನ್ನು ಸಂಗ್ರಹಿಸುವ ಕೆಲಸವನ್ನು ಇವರಿಗೆ ವಹಿಸಲಾಗಿತ್ತು.

ಸಂಧಿವಿಗ್ರಹಿ ವಿದೇಶಾಂಗ ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರಿಯಾಗಿದ್ದನು. ಅಂದರೆ ಯುದ್ಧ ಮತ್ತು ಶಾಂತಿಯ ಮಂತ್ರಿ ಶ್ರೀಕರ್ಣಾಧಿಕಾರಿ, ಮುಖ್ಯ ಲೆಕ್ಕಿಗನಾಗಿದ್ದನು. ರಾಜ ಬೊಕ್ಕಸವು ಅನೇಕ ಅಧಿಕಾರಿಗಳನ್ನೊಳಗೊಂಡಿದ್ದು, ಖಜಾನೆಯ ಚಟುವಟಿಕೆಗಳ

ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಸಮಾಜ ಮತ್ತು ಧರ್ಮಕ್ಕೆ ಸಂಬಂಧಪಟ್ಟ ಮುಖ್ಯ ವಿಚಾರಗಳನ್ನು ಮಹಾಮಂಡಲೇಶ್ವರರು ತೀರ್ಮಾನಿಸುತ್ತಿದ್ದರು. ರಾಜನು 'ಗರುಡ' ಎಂದು ಕರೆಯಲ್ಪಡುತ್ತಿದ್ದ ಅಂಗರಕ್ಷಕರ ವಿಶೇಷ ದಳವನ್ನು ಹೊಂದಿದ್ದನು. ರಾಜನು ಗತಿಸಿದರೆ ಅವರು ಆತ್ಮಾಹುತಿ ಯಾಗುತ್ತಿದ್ದರು. ಚೋಕಿಮಯ್ಯ ವಿಷ್ಣುವರ್ಧನನ ಗರುಡನಾಗಿದ್ದನು. ಗಂಗರಾಜನು ವಿಷ್ಣುವರ್ಧನನ ಅತ್ಯಂತ ಪ್ರಸಿದ್ಧ ಸೇನಾಧಿಪತಿಗಳಲ್ಲಿ ಒಬ್ಬನಾಗಿದ್ದನು. ತನ್ನ ಸೈನಿಕ ಶೌರ್ಯ ಸಾಹಸಗಳಿಂದ ಬಹುಶಃ ಹೊಯ್ಸಳ ಆಸ್ಥಾನದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದನು. ಮತ್ತೋರ್ವ ವಿಷ್ಣುವರ್ಧನನ ಪ್ರಸಿದ್ಧ ಸೇನಾನಿ ಮತ್ತು ಮಂತ್ರಿ ಎಂದರೆ ಪುನಿಸಮಯ್ಯನಾಗಿದ್ದನು.

ರಾಜನ ಆಸ್ಥಾನವು ಭವ್ಯ ಮತ್ತು ವೈಭವೋಪೇತವಾಗಿತ್ತು. ಆಸ್ಥಾನವು ಪಾಳೆಯಗಾರರು, ರಾಜಕುವರರು, ರಾಜಪುರೋಹಿತರು, ಮಂತ್ರಿಗಳು ಮತ್ತಿತರ ಉನ್ನತ ಗಣ್ಯವ್ಯಕ್ತಿಗಳಿಂದ ಕೂಡಿತ್ತು. ಇವರೊಂದಿಗೆ ಅನೇಕ ಬಹುಸಂಖ್ಯೆಯಲ್ಲಿ ವಿಶಿಷ್ಟ ಕವಿಗಳು, ವಿದ್ವಾಂಸರು ಮತ್ತು ಕಲಾವಿದರೂ ಇದ್ದರು. ರಾಜಾಸ್ಥಾನವು ಭವ್ಯ ಮತ್ತು ವೈಭವಪೂರ್ಣ ದೃಶ್ಯವನ್ನು ಬಿಂಬಿಸುತ್ತಿತ್ತು ಮತ್ತು ಆಕರ್ಷಣೆಯ ಕೇಂದ್ರಬಿಂದುವಾಗಿತ್ತು. ರಾಜರ ಆಸ್ಥಾನಗಳು ತಾತ್ವಿಕ ಮತ್ತಿತರ ವಾದ, ಚರ್ಚೆಗಳ ವೇದಿಕೆಯಾಗಿದ್ದವು.

ಆಡಳಿತದ ಅನುಕೂಲಕ್ಕಾಗಿ, ಸಾಮ್ರಾಜ್ಯವು ಪ್ರಾಂತ್ಯಗಳಾಗಿ ವಿಭಜಿಸಲ್ಪಟ್ಟಿತ್ತು ಇವುಗಳನ್ನು 'ನಾಡು'ಗಳೆಂದು ಕರೆಯುತ್ತಿದ್ದರು. ಡಾ|| ಮಹಾಲಿಂಗಮ್‌ರವರ ಅಭಿಪ್ರಾಯದಂತೆ ಪ್ರತಿ ವಲನಾಡುವಿನಲ್ಲಿಯೂ ಅನೇಕ 'ನಾಡು'ಗಳಿದ್ದವು. ಪ್ರತಿ 'ನಾಡು'ವಿನಲ್ಲಿಯೂ 'ಮಂಗಳಂ'ಗಳು ಇರುತ್ತಿದ್ದವು. ಕೆಲವು ಗ್ರಾಮಗಳು ಕೂಡಿ 'ಸ್ಥಳ' ಎಂದು ಕರೆಯಲ್ಪಡುತ್ತಿದ್ದವು. ಹಳ್ಳಿಯು ಅತ್ಯಂತ ನಿಮ್ನ ಘಟಕವಾಗಿತ್ತು.

### ೫.೫ ಯುದ್ಧ ಮತ್ತು ವಿಜಯ

ಹೊಯ್ಸಳ ಸಾಮ್ರಾಜ್ಯವು ಮೂಲತಃ ಚಿಕ್ಕಮಗಳೂರು ಜಿಲ್ಲೆಯಿಂದ ಸಣ್ಣದಾಗಿ ಪ್ರಾರಂಭವಾಗಿ, ಕ್ರಮೇಣ ವಿಕಸಿತವಾಯಿತು. ಈ ಸಾಮ್ರಾಜ್ಯದ ವಿಸ್ತರಣೆಯಲ್ಲಿ ದಂಡನಾಯಕರ ಪಾತ್ರವನ್ನು ಅಲ್ಲಗಳೆಯುವಂತಿಲ್ಲ. ವಾಸ್ತವವಾಗಿ ಅವರು ಹೊಯ್ಸಳ ಸಾಮ್ರಾಜ್ಯದ ಆಧಾರಸ್ಥಂಭ ಗಳಾಗಿದ್ದರು. ಅನೇಕ ಸಂದರ್ಭಗಳಲ್ಲಿ ಹೊಯ್ಸಳರಸರ ಹೆಸರಿನಲ್ಲಿ ಆಡಳಿತಾಧಿಕಾರಿಗಳೇ ಆಕ್ರಮಣಕಾರಿ ಮತ್ತು ರಕ್ಷಣೆಯ ಯುದ್ಧಗಳನ್ನು ಮಾಡುತ್ತಿದ್ದರು. ಅವರು ಸಾಮ್ರಾಜ್ಯದ ರಾಜಕೀಯ ಹಿತಾಸಕ್ತಿಗಳನ್ನು ಕಾಪಾಡುತ್ತಿದ್ದರು. ಶಿಲಾಶಾಸನಗಳ ಪ್ರಕಾರ ಹೊಯ್ಸಳ ಸಾಮ್ರಾಜ್ಯದ ಯುದ್ಧಗಳಲ್ಲಿ ಮತ್ತು ವಿಜಯಗಳಲ್ಲಿ ಭಾಗವಹಿಸಿದ ಆಡಳಿತ ವರ್ಗದ ಸದಸ್ಯರಲ್ಲಿ ಕೆಲವರನ್ನು ಇಲ್ಲಿ ಕೆಳಗೆ ಸೂಚಿಸಿರುವಂತೆ ನಾವು ಗಮನಿಸಬಹುದಾಗಿದೆ.

1) ಮರಿಯಾನೆ ದಂಡನಾಯಕ ಗಂಗರಾಜ್ಯದ ವಿಜಯದಲ್ಲಿ ವಿಷ್ಣುವರ್ಧನನಿಗೆ ಸಹಾಯ ಮಾಡಿದನು.[1]

2) ಮಹಾಮಂತ್ರಿ ಗಂಗರಾಜ ದ್ರೋಹಿಗಳಿಗೆ ಒಂದು ಮೈಲಿಗಲ್ಲು. ಗಂಗರಾಜ ತಲಕಾಡನ್ನು ಗೆದ್ದನು. ಮಹಾಪ್ರಧಾನಿ ಗಂಗರಾಜನ ಅಪೇಕ್ಷೆಯಂತೆ, ಬಿಂಡಿಗನವಿಲೆಯ ತ್ರೀಥನಿಗಾಗಿ, ಸುಪ್ರೀತನಾದ ಹೊಯ್ಸಳದೇವ ವಿಷ್ಣುವರ್ಧನನು ಭೂಮಿಯನ್ನು ದಾನವಾಗಿ ಕೊಟ್ಟನು.[2]

3) ತಿಪ್ಪೂರು ಗ್ರಾಮದ ಈಚಿರಾಜ ಮತ್ತು ಪೋಚಿಕಟ್ಟೆ ಮಗನಾದ ಸೇನಾಧಿಕಾರಿ ಗಂಗ ರಾಜನು ವಿಷ್ಣುವರ್ಧನನಿಂದ ಬಹುಮಾನ ರೂಪವಾಗಿ ಪಡೆದು, ನಂತರ ಅದನ್ನು ತನ್ನ ಧರ್ಮಗುರು, ಮೂಲಸಂಘದ ಮೇಘಚಂದ್ರ ಸಿದ್ಧಾಂತದೇವ – ಕಾನೂರು ಗಣ ಮತ್ತು ತಿಂತ್ರಿವಿಕಗಚ್ಛರಿಗೆ ಒಪ್ಪಿಸಿದನು.[3]

4) ಬಿಟ್ಟಿದೇವನ ಮಹಾಪರಾಕ್ರಮಶಾಲಿ ಮಂತ್ರಿಯಾದ ಪುನಿಸಾಮಯ್ಯನು ತೊಡವರನ್ನು ಭಯಭೀತರನ್ನಾಗಿ ಮಾಡಿದನು. ಕೊಂಗರನ್ನು ಭೂತಳಕ್ಕೆ ಅಟ್ಟಿದನು. ಪೊಲುವರನ್ನು ನಿರ್ನಾಮ ಮಾಡಿದನು ಮತ್ತು ಮಲಯಾಳಿಗಳನ್ನು ಸಂಹರಿಸಿದನು. ಶಾಂತಿ ಮತ್ತು ಯುದ್ಧದ ಮಂತ್ರಿಯಾದ ಪುನಿಸಾಮಯ್ಯನು ತ್ರಿಕೂಟ ಬಸದಿಯ ಬಸದಿಗಳಿಗಾಗಿ, ತರಿ ಭೂಮಿಯನ್ನು ದಾನವಾಗಿ ನೀಡಿದನು.[4]

5) ಸೈನ್ಯಾಧಿಕಾರಿಯಾದ ಬಿಟ್ಟಿಯಣ್ಣನು ಚೋಳರು ಮತ್ತು ಹೊಯ್ಸಳರ ನಡುವೆ ನಡೆದ ನಿಗರಿಲ್ಲಿ ಸೋಲಾಮಂಡಲಂ ಯುದ್ಧದಲ್ಲಿ ರಾಜಾ ವಿಷ್ಣುವರ್ಧನನಿಗೆ ಸಹಾಯ ಮಾಡಿದ್ದನಲ್ಲದೆ ಆ ಯುದ್ಧವನ್ನೂ ಗೆದ್ದನು.[5]

6) ಸೇನಾಧಿಕಾರಿ ಬೋಕಿ ತುಳು ದೇಶವನ್ನೂ ಜೊತೆಗೆ ಬಯಲಂದ್ ಮತ್ತು ಚಂಗಲವ ಮತ್ತು ಕೊಂಗಲವ ದೇಶಗಳನ್ನೂ ಗೆದ್ದನು. ಹೊಯ್ಸಳರಸ ವಿಷ್ಣುವರ್ಧನನ ಕಾಲದಲ್ಲಿ ಬಹಳ ಪ್ರಸಿದ್ಧನಾಗಿದ್ದನು.[6]

7) ಪುನೀಸ ತನ್ನೊಡೆಯ ವಿಷ್ಣುವರ್ಧನನಿಗಾಗಿ ನೀಲಗಿರಿ ಮತ್ತು ಮಲಬಾರ್ ಪ್ರದೇಶಗಳನ್ನು ಗೆದ್ದನು.[7]

8) ಕ್ರಿ.ಶ. 1149ರ ಶಿಲಾಶಾಸನವೊಂದು ತಿಳಿಸುವಂತೆ ಚಾಮದೇವನು ವಿಷ್ಣುವರ್ಧನನ ಸಹಾಯಕನಾಗಿದ್ದನು. ಅವನ ಶೌರ್ಯ ಎಷ್ಟಿತ್ತೆಂದರೆ ಬಿಟ್ಟಿದೇವನ ಸಮ್ಮುಖದಲ್ಲಿಯೇ ಅವನು ಉಚ್ಛಂಗಿಯ ಮೇಲೆ ಆಕ್ರಮಣ ನಡೆಸಿದನು.[8]

9) ಕ್ರಿ.ಶ. 1116–1117ರಲ್ಲಿ ಗಂಗರಾಜನು ಚಾಲುಕ್ಯರ ಸೇನೆಯನ್ನು ಸೋಲಿಸಿದನು.[9]

10) ಬೊಪ್ಪದೇವ ದಣ್ಣಾಯಕನು ವಿಷ್ಣುವರ್ಧನನ ಮೃತ ಶರೀರವನ್ನು ಕ್ರಿ.ಶ. 1141ರಲ್ಲಿ ಬಂಕಾಪುರದಿಂದ ಮುದುಗೆರೆಗೆ ತಂದನು.[10]

ಪ್ರತಿ ನಾಡುವಿನಲ್ಲಿಯೂ, ಆಡಳಿತವನ್ನು ನೋಡಿಕೊಳ್ಳಲು ರಾಜನಿಂದ ನೇಮಿಸಲ್ಪಟ್ಟ ಅಧಿಕಾರಿಯೋರ್ವನಿದ್ದನು. ಅವನನ್ನು ನಾಡಗೌಡ, ನಾಡಪ್ರಭು, ಮತ್ತು ಮಹಾಪ್ರಭು ಎಂಬ

ಹೆಸರುಗಳಿಂದ ಕರೆಯುತ್ತಿದ್ದರು. ಸಾಮಾನ್ಯವಾಗಿ ಆ ಹುದ್ದೆಯ ಉತ್ತರಾಧಿಕಾರತ್ವವು ಅನುವಂಶೀಯ ವಾಗಿತ್ತು. ಸೇನಾಬೋವ ಕಂದಾಯ ಅಧಿಕಾರಿಯಾಗಿದ್ದನು. ನಾಡ ಹೆಗ್ಗಡೆಯು ತನ್ನ ಕೈಕೆಳಗೆ ಅನೇಕ ಅಧಿಕಾರಿಗಳನ್ನು ಹೊಂದಿದ್ದನು. ಪ್ರತಿ 'ನಾಡು'ವೂ ಸುಗಮ ಆಡಳಿತಕ್ಕಾಗಿ, ತನ್ನದೇ ಆದ ಸಭೆಯನ್ನು ಹೊಂದಿತ್ತು. ಅನೇಕ ಊರುಗಳೂ, ಗ್ರಾಮಗಳೂ ಸೇರಿ 'ನಾಡು'ಗಳಾಗಿದ್ದವು. ಊರುಗಳು ತಮ್ಮದೇ ಆದ ನಾಗರಸ್, ಮಹಾನಾಗರಸ್ ಮೊದಲಾದ ಸಭೆಗಳನ್ನು ಹೊಂದಿದ್ದವು.

ಗ್ರಾಮದ ಮುಖ್ಯಸ್ಥನನ್ನು ಸಾಮಾನ್ಯವಾಗಿ 'ಗೌಡ' ನೆಂದು ಕರೆಯುತ್ತಿದ್ದರು. ಗ್ರಾಮ ಸಭೆಗಳಲ್ಲಿ ಶಿಲಾಲಿಪಿಗಳಲ್ಲಿ ಕಂಡುಬರುವ ಗ್ರಾಮಸಭೆಗಳ ಹೆಸರುಗಳೆಂದರೆ ಒಕ್ಕಲು, ಸಮಯ, ಪ್ರಜೆ ಮೊದಲಾದುವು.

### 5.6 ರಾಜಗುರು

ರಾಜನ ಮನೆವಾರ್ತೆಯಲ್ಲಿ ರಾಜಪುರೋಹಿತರಿಗೆ ಬಹುಮುಖ್ಯ ಸ್ಥಾನವಿತ್ತು. ರಾಜನ ಪಟ್ಟಾಭಿಷೇಕವೂ ಸೇರಿದಂತೆ, ಅರಮನೆಯ ಎಲ್ಲಾ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿಯೂ ಅವರ ಸಂಬಂಧವಿತ್ತು.

### 5.7 ನ್ಯಾಯಾಡಳಿತ

ರಾಜನೇ ನ್ಯಾಯದ ಮುಖ್ಯಸ್ಥನಾಗಿದ್ದನು. ಶಿಕ್ಷೆಗಳು ತೀವ್ರವಾಗಿದ್ದವು. ಅಪರಾಧಗಳ ನ್ಯಾಯವನ್ನು ರಾಜನೇ ಖುದ್ದಾಗಿ ಪರಿಶೀಲಿಸುತ್ತಿದ್ದನು ಅಥವಾ ಜಿಲ್ಲೆಯನ್ನು ನೋಡಿಕೊಳ್ಳುತ್ತಿದ್ದ ರಾಜನ ಅಧಿಕಾರಿಗಳೇ ನೋಡಿಕೊಳ್ಳುತ್ತಿದ್ದರು. ರಾಜ್ಯದ ಆದಾಯದ ಬಹುದೊಡ್ಡಪಾಲು 'ದಂಡ' ದಾಗಿತ್ತು.

### 5.8 ಸೈನಿಕ ಆಡಳಿತ

ರಾಜನು ಸೈನ್ಯ ಬಲದ ಮುಖ್ಯ ಅಧಿಪತಿಯಾಗಿದ್ದನು. ರಾಜನಿಂದ ನೇಮಿಸಲ್ಪಟ್ಟ ಅನೇಕ ಸೈನಿಕಾಧಿಕಾರಿಗಳಿದ್ದರು. ಪೌರ ಅಧಿಕಾರಿಗಳಾದ ಮಹಾಪ್ರಧಾನರು, ಸರ್ವಾಧಿಕಾರಿಗಳು ಸೈನಿಕ ಕರ್ತವ್ಯಗಳಲ್ಲಿ ದಕ್ಷರಾಗಿದ್ದರು. ದಂಡನಾಯಕನು ಬಹುಮುಖ್ಯ ಸೈನಿಕ ಅಧಿಕಾರಿಯಾಗಿದ್ದನು. ಸೈನ್ಯವು ಕಾಲಾಳು, ಅಶ್ವದಳ ಮತ್ತು ಗಜದಳಗಳನ್ನೊಳಗೊಂಡಿತ್ತು. ರಥಗಳು ಸೈನ್ಯದ ಬಹುಮುಖ್ಯ ಭಾಗವಾಗಿದ್ದಿತ್ತು.

## ೫.೯ ದಂಡನಾಯಕರಿಗೂ ಮತ್ತು ಸಾರ್ವಭೌಮನಿಗೂ ನಡುವೆ ಇದ್ದ ಅಂತರರಾಜ್ಯ ಸಂಬಂಧ

ದಂಡನಾಯಕರು ಹೊಯ್ಸಳ ಸಾರ್ವಭೌಮತ್ವದ ಆಧಾರಸ್ಥಂಭಗಳಂತೆ ಇದ್ದರು. ಇದು ಹೊಯ್ಸಳ ರಾಜಪ್ರಭುತ್ವದ ಮೂರು ಶ್ರೇಣೀಕೃತ ಪದ್ಧತಿಯ ಮೂಲ ಆಧಾರಿತ ಕೊಂಡಿಯಾಗಿತ್ತು. ಕಾನೂನು, ಸಂಪ್ರದಾಯ ಮತ್ತು ಮಹಾಕಾಂಕ್ಷೆ ಇವು ಹೊಯ್ಸಳ ರಾಜಪ್ರಭುತ್ವದ ರಾಜಕೀಯ ದೃಷ್ಟಿಕೋನವನ್ನು ಮತ್ತು ಆದರ್ಶವನ್ನು ರೂಪಿಸಿದ್ದುವು. ಆದರೂ ಮಹತ್ವಾಕಾಂಕ್ಷೆಯೇನೂ ಅಷ್ಟು ಬಲವಾದ ವಿಚಾರವಾಗಿರಲಿಲ್ಲವಾದರೂ ಕಾನೂನು ಮತ್ತು ಸಂಪ್ರದಾಯವು ಬಹಳ ಮಹತ್ವಪೂರ್ಣ ವಾಗಿದ್ದವು. ಇಲ್ಲಿ ಕಾನೂನೆಂದರೆ ಧರ್ಮದ ರಾಜಶಾಸನವಲ್ಲ, ಹೊಯ್ಸಳ ರಾಜರು ಈ ಧರ್ಮವನ್ನು ಎತ್ತಿ ಹಿಡಿಯಬೇಕಾಗಿತ್ತು.

ಆಳುವವನು ತಂದೆಯಂತೆ, ದುಷ್ಟಶಕ್ತಿಯನ್ನು ದಮನಗೊಳಿಸಿ ಶಿಷ್ಟತೆಯನ್ನು ಎತ್ತಿಹಿಡಿದು ದೇಶವನ್ನು ಆಳಬೇಕಿತ್ತು. ಇದೇ ಯಾವಾಗಲೂ ಸಾರ್ವಭೌಮ ಅಧಿಕಾರದ ವಿಶೇಷ ಕರ್ತವ್ಯವೆಂದು ಮಾನ್ಯವಾಗಿತ್ತು.

ಬಾಲ್ಯ ಎಂಬಲ್ಲಿನ ಬೈರೇದೇವನ ದೇವಾಲಯದಲ್ಲಿ ದೊರೆತಿರುವ ಕ್ರಿ.ಶ. 1125ರ ಶಿಲಾಶಾಸನವೊಂದರಲ್ಲಿ ವಿಷ್ಣುವರ್ಧನನನ್ನು, ಪೂರ್ಣ ಕ್ಷತ್ರಿಯ ಧರ್ಮವನ್ನು ಪ್ರದರ್ಶಿಸಿದ ಜಗತ್ತಿನ ಮಹಾಕ್ಷತ್ರಿಯರಲ್ಲಿ ಒಬ್ಬನೆಂದು ವರ್ಣಿಸಲಾಗಿದೆ. ಇತರ ಮೂವರೆಂದರೆ ರಾಮ, ದಿಲೀಪ ಮತ್ತು ಕೃಷ್ಣರಾಜ.[11] ವಿಷ್ಣುವರ್ಧನನು ಚಿನ್ನದಂಡಾದೀಪನ ಮಗನಾದ ವಿಷ್ಣುದಂಡಾಧಿಪನನ್ನು ತನ್ನ ಸುಪರ್ಧಿಗೆ ತೆಗೆದುಕೊಂಡನು.[12] ಬಹಳ ಬೇಗ ಅವನು ರಾಜನಿಗೆ ಬಹುಪ್ರಿಯನಾದನು ಮತ್ತು ಬಹಳ ಬೇಗ ಉನ್ನತ ಸ್ಥಾನಕ್ಕೇರಿದನು. ಅವನನ್ನು ಮಹಾಪ್ರಚಂಡ ದಂಡನಾಥ ಮತ್ತು ಸರ್ವಾಧಿಕಾರಿಯನ್ನಾಗಿ ಮಾಡಲಾಯಿತು. ಅವನನ್ನು ಸುಮದಿ ದಂಡನಾಯಕನೆಂದು ಕರೆಯಲಾಗುತ್ತಿತ್ತು. ಈ ಬಿರುದು ಗಂಗರಾಜನಂತಹ ಅತ್ಯಂತ ಪ್ರಸಿದ್ಧ ಸೈನ್ಯಾಧಿಕಾರಿಗಳು ಮಾತ್ರ ಪಡೆಯುವಂತಹುದಾಗಿತ್ತು. ಇಷ್ಟೆಲ್ಲಾ ಅನುಕೂಲಕರ ಅಂಶಗಳಿದ್ದರು ಈ ಯುವಕನನ್ನು ರಾಜನ ಪಂಚ ಪ್ರಧಾನ ಮಂತ್ರಿಮಂಡಲಕ್ಕೆ ತೆಗೆದುಕೊಳ್ಳಲಾಗಲಿಲ್ಲ. ಏಕೆಂದರೆ ಆಗಿನ ಪದ್ಧತಿ ಮತ್ತು ಧರ್ಮದ ಪ್ರಕಾರ ಇಲಾಖೆಯ ಅತ್ಯಂತ ಹಿರಿಯ ಸದಸ್ಯರು ಮಾತ್ರ ಮಂತ್ರಿಮಂಡಲದ ಸದಸ್ಯರಾಗಬಹುದಿತ್ತು.

ಹೊಯ್ಸಳರಸರು ನಡತೆ ಅಥವಾ ಸಂಯಮವನ್ನು ಮತ್ತು ಏಕತೆಯ ರಾಜತ್ವವನ್ನು ತೋರುತ್ತಿದ್ದರು. ರಾಜಪ್ರಭುತ್ವದ ಪರಮಾಧಿಕಾರವು ಎಲ್ಲರಿಗೂ ಒಪ್ಪಿಗೆಯಾಗಿತ್ತು ಹಾಗೂ ವಿವಿಧ ಸ್ಥಾನಗಳ ದಂಡನಾಯಕರಿಗೂ ಇದು ಒಪ್ಪಿಗೆಯಾಗಿತ್ತು. ಈ ಕಾಲದಲ್ಲಿ ಹೊಯ್ಸಳ ರಾಜರು ದಂಡನಾಯಕರ ಸಹಮತದಿಂದಲೇ ಕಾರ್ಯ ನಿರ್ವಹಿಸುತ್ತಿದ್ದರು. ಈ ಕಾಲದಲ್ಲಿ ದಂಡನಾಯಕರು ತಮ್ಮ ಅಧಿಕಾರ ವ್ಯಾಪ್ತಿಯ ಜನರಿಗೂ ಮತ್ತು ಸಾರ್ವಭೌಮ ಅಧಿಕಾರಕ್ಕೂ

ನಡುವೆ ಕೊಂಡಿಯಂತೆ ಕೆಲಸ ಮಾಡುತ್ತಿದ್ದರು. ಅಂದಿನ ಹೊಯ್ಸಳ ಅರಸರಿಗೆ, ದಂಡನಾಯಕರಲ್ಲಿ ದೋರಸಮುದ್ರದಲ್ಲಿ ಅತ್ಯಂತ ಸಮೀಪವರ್ತಿಗಳೆಂದರೆ, ಮಹಾಪ್ರಧಾನ ಅಥವಾ ಸರ್ವಾಧಿಕಾರಿ ಎಂಬ ಬಿರುದುಗಳನ್ನು ಪಡೆದ ಮಂತ್ರಿಗಳು ಎನ್ನಬಹುದು. ಅವರು ಆಡಳಿತದ ಮುಂಚೂಣಿಯಲ್ಲಿದ್ದರು ಮತ್ತು ಪ್ರಾಂತೀಯ ಮಟ್ಟದಲ್ಲಿ ದಂಡನಾಯಕರಿಗೂ ಮತ್ತು ರಾಜರಿಗೂ ಸೇತುವೆಯಂತಿದ್ದರು. ಇವರೆಲ್ಲಾ ಕಲಿತವ ರಾಗಿದ್ದರು ಮತ್ತು ಒಳ್ಳೆಯ ವಿದ್ಯಾರ್ಹತೆಯನ್ನು ಹೊಂದಿದ್ದರು.

ಹೊಯ್ಸಳ ಕಾಲದಲ್ಲಿ ರಾಜನು ತನ್ನ ಮಂತ್ರಿಗಳ ಸಲಹೆಯನ್ನು ಪಡೆಯಲೇ ಬೇಕಿತ್ತು.[14] ತಾನೇನಾದರೂ ಕಾರ್ಯಗತಗೊಳಿಸುವ ನಿರ್ಧಾರ ತೆಗೆದುಕೊಂಡಿದ್ದರೆ, ಅವನೊಬ್ಬನೇ ಹಾಗೆ ಮಾಡುವಂತಿರಲಿಲ್ಲ. ಹಾಗೇನಾದರೂ ಒಬ್ಬನೇ ನಿರ್ಧಾರ ಕೈಗೊಂಡಿದ್ದರೆ, ಅದು ರಥವನ್ನು ಒಂದೇ ಚಕ್ರದ ಮೇಲೆ ನಡೆಸಿಕೊಂಡಂತಾಗುತ್ತಿತ್ತು.[15]

ಆ ಕಾಲದಲ್ಲಿ ಪರಿಶೀಲಿಸಿದರೆ ಸ್ವಲ್ಪ ಮಟ್ಟಿಗೆ ವಂಶಪಾರಂಪರ್ಯ ಮಂತ್ರಿ ಪದವಿಯ ತತ್ವವೇ ಜಾರಿಯಲ್ಲಿತ್ತೆಂಬುದಕ್ಕೆ ಉದಾಹರಣೆಗಳು ಇವೆ.[16] ಆಳುವವರು ಮಂತ್ರಿಮಂಡಲಕ್ಕೆ ಹೊಸ ನೇಮಕಾತಿಗಳನ್ನು ಮಾಡುವಾಗ ಮಂತ್ರಿಗಳ ಕುಮಾರರನ್ನು ಮತ್ತು ಸಂಬಂಧಿಕರನ್ನು ಆಯ್ಕೆ ಮಾಡುತ್ತಿದ್ದರು. ಕ್ರಿ.ಶ. 1120ರಲ್ಲಿ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ದಂಡನಾಯಕ ಗಂಗ ರಾಜನು ಒಬ್ಬ ಯೋಧನಾಗಿದ್ದನು.[17]

ಹೊಯ್ಸಳರಸ ವಿಷ್ಣುವರ್ಧನನು ಮಂತ್ರಿಮಂಡಲಕ್ಕೆ ಮಂತ್ರಿಗಳನ್ನು ನೇಮಿಸುವಾಗ ಬಹಳ ಎಚ್ಚರಿಕೆ ವಹಿಸುತ್ತಿದ್ದನು. ಕಲಿತ ವಿದ್ವಾಂಸರು ಮತ್ತು ವಿಶಿಷ್ಟ ಗುಣವಂತರು ಮತ್ತು ರಾಜ್ಯಕ್ಕೆ ಸೇವೆ ಸಲ್ಲಿಸಿದ ಕುಟುಂಬಗಳಿಗೆ ಸೇರಿದವರು ಮಾತ್ರ ಆಯ್ಕೆಯಾಗುತ್ತಿದ್ದರು.

## 5.10 ದಂಡನಾಯಕರು – ಅಧಿಕಾರ ವರ್ಗ

1) ರಾಜನ ಕಾರ್ಯಗಳು
2) ಹೊಯ್ಸಳ ಸಾಮ್ರಾಜ್ಯ
3) ದಂಡನಾಯಕರ ಸ್ಥಾನಮಾನ

### 1) ರಾಜನ ಕಾರ್ಯಗಳು

ಆಡಳಿತ ಪದ್ಧತಿಯಲ್ಲಿ ರಾಜನ ಕರ್ತವ್ಯಗಳಲ್ಲಿ ಅವನ ಪಾತ್ರವು ಒಬ್ಬ ತ್ಯಾಗಿಯಾಗಿ ಬಹು ಮುಖ್ಯವಾಗಿತ್ತು. ಹೊಯ್ಸಳರಸರು, ವಿಷ್ಣುವರ್ಧನನಿಂದ ಮೊದಲುಗೊಂಡು ತಮ್ಮನ್ನು ತಾವು 'ದೇವ' ಎಂದು ಪರಿಗಣಿಸುತ್ತಿದ್ದರು. ಅದರ ಅರ್ಥ ದೇವರ ರೀತಿಯ ನಡತೆ ಮತ್ತು

ರಾಜನ ಪರಮಾಧಿಕಾರವನ್ನು ಸೂಚಿಸುತ್ತಿತ್ತು. ಈ ಕಾಲವು ಪುರೋಹಿತವರ್ಗದ ನಿಯಂತ್ರಣಕ್ಕೊಳಪಟ್ಟಿತ್ತು.

ರಾಜನ ಮುಖ್ಯ ಕರ್ತವ್ಯವು ಈಗಿನ ರೂಢಗತ ವ್ಯವಸ್ಥೆ 'ಧರ್ಮ'ವನ್ನು ಎತ್ತಿಹಿಡಿಯುವು ದಾಗಿತ್ತು ಮತ್ತು ಈ ಧರ್ಮವು 'ಅನಂತ' ಅಥವಾ ಶಾಶ್ವತ ಮೌಲ್ಯಗಳಾಧಾರಿತವಾಗಿತ್ತು. ಅವನು ತನ್ನ ರಾಜ್ಯದ ಪರಿಮಿತಿಯಲ್ಲಿ ಒಗ್ಗೂಡಿಸುವ ಕೇಂದ್ರವಾಗಿದ್ದನು. ಪದ್ಧತಿಯ ಕೇಂದ್ರಬಿಂದು ಏಕೆಂದರೆ ಎಲ್ಲರೂ ತಮ್ಮ ಉಳಿವಿಗಾಗಿ ಧರ್ಮವನ್ನೇ ಅವಲಂಬಿಸಬೇಕಾಗಿತ್ತು ಮತ್ತು ಪ್ರತಿಯಾಗಿ ಧರ್ಮದ ಅಸ್ಥಿತ್ವವು ರಾಜನನ್ನೇ ಅವಲಂಬಿಸಿತ್ತು.[1] ಹೊಯ್ಸಳರಸರು ಧರ್ಮಶಾಸ್ತ್ರದ ಪರಂಪರಾಗತ ತತ್ವಗಳನ್ನೇ ಅನೂಚಾನವಾಗಿ ಅನುಸರಿಸಿದರು ಅಥವಾ ಸ್ಮೃತಿಗಳಲ್ಲಿ ಮತ್ತು ಮಹಾಭಾರತದಲ್ಲಿ ತಿಳಿಸಿದಂತೆ 'ಪವಿತ್ರ ಕಾನೂನಿನ' ಸೂಚನೆಗಳನ್ನೇ ತಪ್ಪದೆ ಅನುಷ್ಟಾನಕ್ಕೆ ತಂದರು.[2] ರಾಜನು ನಿರ್ವಹಿಸಬೇಕಾದ ಪರಂಪರಾಗತವಾದ ಕರ್ತವ್ಯಗಳೆಂದರೆ, ವಿಜಯಗಳನ್ನು ಸಾಧಿಸುವುದು ಮತ್ತು ತನ್ನ ರಾಜ್ಯದ ಎಲ್ಲೆಗಳನ್ನು ವಿಸ್ತರಿಸುವುದು ಇವೇ ಆಗಿದ್ದವು. ವಿಜಯ ಎನಿಸುವ ರಾಜನನ್ನು ಸ್ವರ್ಗಾಧಿಪತಿಯಾದ ದೇವನಾದ ವಿಷ್ಣುವಿನೊಂದಿಗೆ ಸಂಬಂಧ ಕಲ್ಪಿಸಲಾಗುತ್ತಿತ್ತು. ವಿಷ್ಣುವಿನಂತೆ ಮಾದರಿಯಾದ ರಾಜನು ವಿಜಯಗಳ ಮೂಲಕ ತನ್ನ ಜನರ ಸಮೃದ್ಧಿಯನ್ನೂ ಮತ್ತು ಕ್ಷೇಮವನ್ನೂ ಏರಿಸುವುದಾಗಿತ್ತು.

ಪ್ರಥಮ ಮಹಾನ್ ಹೊಯ್ಸಳರಸನಾದ ವಿಷ್ಣುವರ್ಧನನು ತನ್ನ ರಾಜ್ಯಭಾರವನ್ನು ವಿಜಯ ಶಾಲಿಯಾದ ಮತ್ತು ಉದಾರಿಯಾದ ರಾಜ ದೇವನ ತಾರ್ಕಿಕವಾದ ಆದರ್ಶದ ಹಾದಿಯಲ್ಲಿಯೇ ಅವನ ವಿಚಾರಕ್ಕನುಗುಣವಾಗಿಯೇ ರೂಪಿಸಿದನು. ಇದು ರಾಜನು ಸಿಂಹಾಸನವನ್ನೇರಿದಾಗ, ತಾನು ಇಟ್ಟುಕೊಂಡ ಹೆಸರಿನಿಂದಲೇ ಈ ವಿಚಾರವು ಸಾಬೀತಾಗಿರುವುದು. ವಿಷ್ಣುವರ್ಧನನು ತಾನು ಇಟ್ಟುಕೊಂಡ ಬಿರುದು 'ತ್ರಿಭುವನ ಮಲ್ಲ' ಅಂದರೆ 'ಮೂರು ಲೋಕಗಳ ಒಡೆಯ'.[3]

ವಿಷ್ಣುವರ್ಧನನ ಆಳ್ವಿಕೆಯು ಮಹಾನ್ ಸೈನಿಕ ಬಲ ಮತ್ತು ಧಾರ್ಮಿಕ ಪುನರುತ್ಥಾನದ ಯುಗವಾಗಿತ್ತು ಮತ್ತು ಅದು ಒಂದು ಹೊಸ ಸಾಂಸ್ಕೃತಿಕ ವ್ಯವಸ್ಥೆಯ ತಳಹದಿಯನ್ನು ಹಾಕಿತು. ಅವನ ಸೈನಿಕ ಸಾಹಸಗಳು ಅವನ ರಾಜ್ಯವನ್ನು ಅದರ ಮೊದಲಿನ ಎಲ್ಲೆಗಳನ್ನು ದೂರ ದೂರ ದಾಟಿ ವಿಸ್ತರಿಸಲು ಅವನಿಗೆ ಸಹಾಯ ಮಾಡಿದುವು ಮತ್ತು ತನ್ನ ಸರಧಿಯ ಎಲ್ಲಾ ಅಂಶಗಳನ್ನು ತನ್ನ ಅಣತಿಯೊಳಗೆ ತರಲು ಸುಗಮವಾಯಿತು. ವಿಷ್ಣುವರ್ಧನನು ತನ್ನ ಸಹೋದರ ಮೊದಲನೆಯ ಬಲ್ಲಾಳನೊಂದಿಗೆ ಪಾಂಡ್ಯರನ್ನು ಗೆದ್ದನು ಮತ್ತು ಚೋಳರ ಅಧೀನದಲ್ಲಿದ್ದ ಗಂಗವಾಡಿ ಪ್ರದೇಶ ವಿಜಯೋತ್ಸವವನ್ನು ಪ್ರಾರಂಭಿಸಿದನು ಮತ್ತು 1116ರ ವೇಳೆಗೆ ಕೊಂಗುವಿನವರೆವಿಗೂ

ಗಂಗವಾಡಿ 96,000 ವನ್ನು ಮುತ್ತಿಗೆ ಹಾಕಿದನು ಮತ್ತು ಅದರ ರಾಜಧಾನಿಯಾದ ತಲಕಾಡಿನಿಂದ ಚೋಳರನ್ನಟ್ಟಿದನು. ನವಗಲಿ, ಬನವಾಸಿ, ಬೆಳವೊಲ, ಹಲಸಿಗೆ, ಹಾನಂಗಲ್, ನೊಳಂಬವಾಡಿ ಮತ್ತು ಉಚ್ಛಂಗಿಯನ್ನು ವಶಪಡಿಸಿಕೊಂಡನು.[4]

ಈ ಸೈನಿಕ ವಿಜಯಗಳು ಅನಿವಾರ್ಯವಾಗಿ ಭೂಪ್ರದೇಶದಲ್ಲಿ ಹೆಚ್ಚು ವಿಸ್ತಾರವನ್ನೂ, ಜನಸಂಖ್ಯೆ ಮತ್ತು ಸಂಪತ್ತಿನಲ್ಲಿ ಹೆಚ್ಚಳವನ್ನೂ ತಂದವು.

ವಿಷ್ಣುವರ್ಧನನ ಹೊಯ್ಸಳ ಸಾಮ್ರಾಜ್ಯದ ಕನಸು ಅವನ ಮೊಮ್ಮಗನಾದ ಎರಡನೇ ಬಲ್ಲಾಳನ ಆಳ್ವಿಕೆಯವರೆವಿಗೂ ನನಸಾಗಲಿಲ್ಲ. ಅವನ ಮಗನಾದ ಮೊದಲನೇ ನರಸಿಂಹನು ಅದಕ್ಷ ರಾಜನಾಗಿದ್ದನು ಮತ್ತು ಕ್ರಿ.ಶ. 1141 ರಿಂದ 1173ರ ವರೆಗಿನ ಅವನ ಆಳ್ವಿಕೆಯ ವರ್ಷಗಳು ಸೋಲನ್ನೂ ಮತ್ತು ತುಂಗಭದ್ರ ಪ್ರದೇಶದಲ್ಲಿ ಭೂಪ್ರದೇಶದಲ್ಲಿ ನಷ್ಟವನ್ನು ಕಂಡವು.

ಹೀಗೆ ರಾಜನು ತನ್ನ ರಾಜ್ಯದಲ್ಲಿ ಒಗ್ಗೂಡಿಸುವ ಸ್ಫೂರ್ತಿಯಾಗಿದ್ದು ವ್ಯವಸ್ಥೆಯ ಕೇಂದ್ರ ಬಿಂದುವಾಗಿದ್ದನು.[5] ಹೊಯ್ಸಳ ಸಾಮ್ರಾಜ್ಯದ ಉಚ್ಛ್ರಾಯ ಸ್ಥಿತಿಯಲ್ಲಿ ಅದರ ಆಡಳಿತವು ದಕ್ಷವಾಗಿತ್ತು. ಆದರೆ ಮೊದಲೇ ಕಂಡುಬಂದಂತೆ ಅದರ ಕ್ಷಮತೆಯು ರಾಜನ ಸಾಮರ್ಥ್ಯವನ್ನೇ ಬಹುಮಟ್ಟಿಗೆ ಅವಲಂಬಿಸಿತ್ತು. ಅದೂ ಅಲ್ಲದೆ, ಧಾರ್ಮಿಕ ನಿಯಮಗಳ ಪ್ರಕಾರ ರಾಜನ "ಧರ್ಮ"ವನ್ನು ಅರ್ಥೈಸಿದಂತೆ ಅವನ ಕರ್ತವ್ಯವು ಬ್ರಾಹ್ಮಣರಿಗೆ ಮತ್ತು ಪಂಚಪ್ರಧಾನರ ಮಂಡಲಕ್ಕೆ ತಲೆಬಾಗಿ ನಡೆಯುವುದೇ ಆಗಿತ್ತು. ಈ ಎರಡು ಅಂಶಗಳೂ ರಾಜನ ಅಧಿಕಾರಕ್ಕೆ ಬಲವಾದ ಅಂಕುಶಗಳಾಗಿದ್ದವು.

ಐವರು ಮಂತ್ರಿಗಳ ಸಮಿತಿಯು ರಾಜನಿಗೆ ನೇರವಾಗಿ ನೆರವು ನೀಡುವುದು ಹೊಯ್ಸಳ ಆಡಳಿತ ಪದ್ಧತಿಯಲ್ಲಿ ನಿರ್ಣಾಯಕ ಪಾತ್ರ ವಹಿಸುವುದು. ಈ ಸಮಿತಿಯ ಕರ್ತವ್ಯವಾಗಿತ್ತು.[6] ಇವರನ್ನು ಸಂಧಿವಿಗ್ರಹಿ, ಶ್ರೀ ಕರ್ಣಾಧಿಕಾರಿ, ಹಿರಿಯ ಭಂಡಾರಿ ಸೇನಾಧಿಪತಿ ಮತ್ತು ಮಹಾಪಸಾಯತ ಎಂದು ಕರೆಯಲಾಗುತ್ತಿತ್ತು. ಈ ವ್ಯಕ್ತಿಗಳು ರಾಜನ ಮುಖ್ಯ ಸಲಹೆಗಾರ ರಾಗಿದ್ದರು.[7] ಇವರನ್ನು ಬಹಳ ಎಚ್ಚರಿಕೆಯಿಂದ ಆಯ್ಕೆ ಮಾಡಲಾಗುತ್ತಿತ್ತು ಮತ್ತು ಇವರು ನಿಷ್ಟೆ, ಅನಾಸಕ್ತಿ, ಔದಾರ್ಯ ಮತ್ತು ಧೈರ್ಯ[8] – ಶೀಲದ ಈ ನಾಲಕ್ಕೂ ಪರೀಕ್ಷೆಗಳಲ್ಲಿ ಗೆದ್ದು ಪೂರ್ಣತಃ ಪರಿಣಿತರಾಗುವ ಅಗತ್ಯವಿತ್ತು. ಇವರು ಬಹಳ ಅಪರೂಪವೆನಿಸುವ ಗುಣಗಳನ್ನು ಹೊಂದಿದ್ದು, ಗಣ್ಯ ಕುಟುಂಬಗಳಿಂದ ಬಂದವರಾಗಿದ್ದರು. ಎಷ್ಟೋ ಸಂದರ್ಭಗಳಲ್ಲಿ ಹೊಯ್ಸಳರಸರ ತಲೆಮಾರು ಗಳಲ್ಲಿ, ಆಡಳಿತ ಮತ್ತು ಸೈನಿಕ ಸಲಹೆಗಾರರಂತೆ ಸೇವೆ ಸಲ್ಲಿಸಿದ್ದಾರೆ.

ಈ ಮಂತ್ರಿಗಳ ಕೈಕೆಳಗೆ ಅಧಿಕಾರಿಗಳ ಮೂರು ಮುಖ್ಯ ಗುಂಪುಗಳಿದ್ದವು. ಇವರಲ್ಲಿ ಅತ್ಯುನ್ನತವಾದದ್ದು ದಂಡನಾಯಕರದ್ದು. ಇವರುಗಳು ಸೈನ್ಯದಲ್ಲಿ ಮುಖ್ಯಾಧಿಕಾರಿಗಳಾಗಲೀ ಅಥವಾ ಪೌರಾಡಳಿತದಲ್ಲಿ ತತ್ಸಮಾನ ಸ್ಥಾನ ಹೊಂದಿರುವವರಾಗಲೀ ಆಗಿರುತ್ತಿದ್ದರು. ಎರಡನೆಯ ಗುಂಪು ಮಹಾಪ್ರಧಾನರದ್ದು ಅಥವಾ ರಾಜನ ಸಲಹೆಗಾರರಾಗಿ ಕೆಲಸ ಮಾಡಿದ ಪೌರರಾಗಿರುತ್ತಿದ್ದರು. ಕೊನೆಯದಾಗಿ ನಾಯಕರದ್ದು ಕಾಲಾಳುಗಳ ಮುಖ್ಯಸ್ಥರಾಗಿರುತ್ತಿದ್ದರು ಅಥವಾ ಗೃಹದಳದವ ರಾಗಿರುತ್ತಿದ್ದರು.[9]

ಬೇರೆ ಬೇರೆ ಸ್ಥಾನ ಮತ್ತು ಅಂತಸ್ತುಗಳುಳ್ಳ ದಂಡನಾಯಕರು ಮಾಂಡಲೀಕರು ಅಥವಾ ಸಾಮಂತರು ಅನೇಕ ವಿಸ್ತಾರಗಳುಳ್ಳ ಭೂ ಪ್ರದೇಶವನ್ನು ಹೊಂದಿದ್ದು ಆಡಳಿತಾಧಿಕಾರಿಗಳ ವರ್ಗಕ್ಕೆ ಸೇರಿದವರಾಗಿದ್ದರು. ದಂಡನಾಯಕರೇ ನಾಡನ್ನು ಆಳುವ ವಿವಿಧ ವಿಭಾಗೀಯ ಮುಖ್ಯಸ್ಥರಾಗಿದ್ದರು. ದಂಡನಾಯಕರು ಮುಖ್ಯವಾಗಿ ಬೇರೆ ಬೇರೆ ಹೆಸರುಗಳಿಂದಲೂ ಕರೆಯಲ್ಪಡುತ್ತಿದ್ದರು. ಶಿಲಾಲಿಪಿಗಳು ಅವರನ್ನು ನಾಡಲ್ಪರೆಂದು ಅಥವಾ ಸಾಕಷ್ಟು ನಿರ್ದಿಷ್ಟ ಭೌಗೋಳಿಕ ಪರಿಮಿತಿಯುಳ್ಳ 'ನಾಡು'ಗಳ ರಾಜ್ಯಪಾಲರೆಂದು ವರ್ಣಿಸುತ್ತವೆ. ಆಡಳಿತ ಕ್ರಮಾಗತ ವ್ಯವಸ್ಥೆಯಲ್ಲಿ ಅವರ ಸ್ಥಾನ ಮಾನಗಳು ಮತ್ತು ಅಂತಸ್ತುಗಳು ಎರಡು ವಿಷಯಗಳ ಆಧಾರದ ಮೇಲೆ ನಿರ್ಧರಿಸಲ್ಪಡುತ್ತಿದ್ದವು.

**ಎ) ದಂಡನಾಯಕರ ಕಾರ್ಯಾಲಯಕ್ಕೆ ಲಗತ್ತಿಸಿದ್ದ ಬಿರುದುಗಳು**

ಅವರ ಅಧೀನದಲ್ಲಿದ್ದ ನಾಡುಗಳ ಸಂಖ್ಯೆಗಳಿಗನುಗುಣವಾಗಿ ಶಿಲಾಲಿಪಿಗಳಲ್ಲಿ ಮಹಾಪ್ರಧಾನ, ಸರ್ವಾಧಿಕಾರಿ, ಮನ್ನೇಯ, ಮಾಂಡಲೀಕ, ಮಹಾಪಸಾಯತ ಮತ್ತು ಸಂಧಿವಿಗ್ರಹಿ ಈ ಹೆಸರುಗಳು ಅವರ ಕಾರ್ಯಗಳನ್ನಾಧರಿಸಿದ ಬಿರುದುಗಳು ಅವರ ಅಧಿಕಾರ ವ್ಯಾಪ್ತಿಯನ್ನು ಸೂಚಿಸುವಂತಹವು. ಆದರೂ ಇವರು ಪ್ರಭುಗಳಿಗೆ ಆಪ್ತರಾಗಿದ್ದರು ಮತ್ತು ಹೆಚ್ಚಿನ ಸ್ವಾಮಿಭಕ್ತಿಯನ್ನು ತೋರುವವರಾಗಿದ್ದರು.

ಮತ್ತೆ ಕೆಲವು ಹೊಯ್ಸಳ ಶಿಲಾಲಿಪಿಗಳು ರಾಜನು ಅವರು ಸಲ್ಲಿಸಿದ ಸೇವೆಗಾಗಿ ಉದಾರವಾದ ಧನಸಹಾಯವನ್ನು ಅವರಿಗೆ ನೀಡಿರುವ ವಿಷಯವನ್ನು ದೃಢೀಕರಿಸುತ್ತವೆ. ಆದುದರಿಂದ ದಂಡನಾಯಕರು ಹೊಯ್ಸಳರಸರ ಪ್ರೀತಿಪಾತ್ರರಾಗಿದ್ದರು.

**ಬಿ) ಹೊಯ್ಸಳ ಸಾಮ್ರಾಜ್ಯ**

ಹೊಯ್ಸಳ ಸಾಮ್ರಾಜ್ಯವು ಆಡಳಿತದ ಅನುಕೂಲಕ್ಕಾಗಿ ಅನೇಕ ಪ್ರಾಂತ್ಯಗಳಾಗಿ ವಿಭಜಿಸಲ್ಪಟ್ಟಿತ್ತು. ಪ್ರತಿಯೊಂದು ಪ್ರಾಂತ್ಯವೂ ಒಬ್ಬ ರಾಜ್ಯಪಾಲನ ಆಳ್ವಿಕೆಗೆ ಒಳಪಟ್ಟಿತ್ತು. ಈ ಪ್ರಾಂತ್ಯದ ರಾಜ್ಯಪಾಲರು ಹೀಗಿರಬಹುದಿತ್ತು.

ಮಂಡಲೇಶ್ವರರು ಅಥವಾ ಹಿಂದಿನ ಆಳುವ ಕುಟುಂಬಗಳ ರಾಜಕುವರರು ಅಥವಾ ಮಾಂಡಲೀಕರೆಂದು ಕರೆಯಲಾಗುತ್ತಿದ್ದ ಚಿಕ್ಕ ಪ್ರಾಂತ್ಯಗಳ ಮುಖ್ಯಸ್ಥರು[10] ಅಥವಾ

ರಾಜನ ಅಥವಾ ರಾಣಿಯ ಸಂಬಂಧಿಕರು ಕೆಲವೊಮ್ಮೆ ಯುವರಾಜನೂ ಸೇರಿದಂತೆ ಅಥವಾ ಸ್ವತಃ ರಾಣಿಯರೇ ಆದರೂ ಆಗಬಹುದಿತ್ತು.[11] ಅಥವಾ

**ಸಿ) ದಂಡನಾಯಕರು[12]**

ಪ್ರಾಂತೀಯ ಸರಕಾರಗಳು ಕೇಂದ್ರೀಯ ಆಡಳಿತವನ್ನೇ ತಪ್ಪದೆ ಅನುಸರಿಸುತ್ತಿದ್ದವು ಮತ್ತು ಪೌರ ಮತ್ತು ಸೈನಿಕ ಕರ್ತವ್ಯಗಳೆರಡನ್ನೂ ನಿರ್ವಹಿಸುವ ಉದ್ದೇಶವನ್ನು ಹೊಂದಿದ್ದವು. ಅದೇ ರೀತಿ, ರಾಜ್ಯಪಾಲರಿಗೆ 'ಸಲಹೆಗಾರ' ಮಹಾಪ್ರಧಾನರು, ಖಜಾಂಚಿಯಾದ ಭಂಡಾರಿ, ಒಬ್ಬ ಸೇನಾಬೋವ, ಕಾರ್ಯದರ್ಶಿ ಮತ್ತು ಅನೇಕ ಹೆಗ್ಗಡೆಗಳು, ಸಹಾಯಕರು, ರಾಜ್ಯಪಾಲರಿಗೆ ಆಡಳಿತದಲ್ಲಿ ನೆರವು ನೀಡುತ್ತಿದ್ದರು. ಅಲ್ಲದೆ ಪುರುಷ ಪೇದೆಗಳ ಒಂದು ಗುಂಪು ಸಹ ಇತ್ತು ಮತ್ತು ಬಾಲ್ಮನುಷ್ಯ ಅಂಗರಕ್ಷಕರು ಅಲ್ಲದೆ ಅಶ್ವದಳ ಮತ್ತು ಕೆಲವು ಆನೆಗಳೂ ಸಹ ಇದ್ದುವು.[13]

ಪ್ರಾಂತ್ಯಗಳೊಳಗೆ ನಾಡುಗಳು ಅಥವಾ ಸಣ್ಣ ಆಡಳಿತದ ಕ್ಷೇತ್ರಗಳು-ಹೆಗ್ಗಡೆ, ಕರ್ಣ, ರಾಜ್ಯದ್ಯಾಶರ ಕರ್ಣ ಅಥವಾ ರಾಜ್ಯ ಹೆಗ್ಗಡೆ[14] ಹೀಗೆ ಅನೇಕ ರೀತಿ ಕರೆಯಲ್ಪಡುವ ಅಧಿಕಾರಿಗಳ ನೇತೃತ್ವದಲ್ಲಿದ್ದುವು. ತೆರಿಗೆಗಳನ್ನು ಸಂಗ್ರಹಿಸುವುದು, ವಿವಾದಗಳನ್ನು ಬಗೆಹರಿಸುವುದು ಮತ್ತು ಯುದ್ಧದ ಸಮಯದಲ್ಲಿ ಸೈನಿಕ ಕಾರ್ಯಾಚರಣೆಯನ್ನು ಕೈಗೊಳ್ಳುವುದು ಮೊದಲಾದುವು ಬಹುಮಟ್ಟಿಗೆ ಇವರ ಕರ್ತವ್ಯಗಳಾಗಿದ್ದವು.

ಹೊಯ್ಸಳರ ಆಡಳಿತ ಪದ್ಧತಿಯ ಅತ್ಯಂತ ಸಣ್ಣ ಘಟಕವೆಂದರೆ ಗ್ರಾಮಸಭೆ ಇದರ ಮುಖ್ಯಸ್ಥನನ್ನು 'ಗವುಂಡ' ಅಥವಾ 'ಗೌಂಡ'ನೆಂದು ಕರೆಯುತ್ತಿದ್ದರು. ಸರ್ವಾನುಮತದಿಂದ ಅವನ ಆಯ್ಕೆಯಾಗುತ್ತಿತ್ತು ಮತ್ತು ಯಾವುದಾದರೊಂದು ರೀತಿಯ ಸಾರ್ವಜನಿಕ ಸೇವೆಯಿಂದ ಅವನು ವಿಶಿಷ್ಟ ವ್ಯಕ್ತಿಯಾಗಿ ತನ್ನನ್ನು ಗುರುತಿಸಿಕೊಂಡವನು ಮಾತ್ರ ಅಂತಹ ವ್ಯಕ್ತಿಯಾಗಿರಬಹುದೆಂದು ತೋರುತ್ತದೆ.[15] ಅವನ ಕೈಕೆಳಗೆ ಗ್ರಾಮಸಭೆಯ ಮಿತಿಯಲ್ಲಿ ಒಂದು ರೀತಿಯ ಕಾರ್ಯಾಂಗ ರಚನೆಯಾಗಿದ್ದು, ಇದರಲ್ಲಿ ಎಂಟು ವೃತ್ತಿಗಳ ಪ್ರತಿನಿಧಿಗಳಿರುತ್ತಿದ್ದರು.

### 5.11 ದಂಡನಾಯಕರ ಸ್ಥಾನಮಾನ

ಆಡಳಿತದ ಮಜಲುಗಳಲ್ಲಿ ಒಬ್ಬ ವ್ಯಕ್ತಿಯ ಸ್ಥಾನವು ಅದರ ಮಾನ್ಯತೆಯು ಅನೇಕ ವಿಚಾರಗಳನ್ನವಲಂಬಿಸಿತ್ತು. ಅವನ ಅಧೀನದಲ್ಲಿರುವ ಭೂ ಮಿತಿಯ ವಿಸ್ತಾರ, ಆದಾಯ,

ಬಿರುದುಗಳು ಮತ್ತಿತರ ವಿಚಾರಗಳು-ಶಿಲಾಶಾಸನಗಳ ಕೂಲಂಕುಷ ಅಧ್ಯಯನದ ಪರಿಣಾಮವಾಗಿ, ಆಡಳಿತ ವರ್ಗಕ್ಕೆ ಸೇರಿದ, ಅನೇಕ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ನಮಗೆ ಈ ಕೆಳಕಂಡಂತೆ ಮಾಹಿತಿ ಲಭ್ಯವಿದೆ. ಇದರಿಂದ ಅವರ ಸ್ಥಾನಕ್ಕನುಗುಣವಾಗಿ ಅವರು ಗಳಿಸಬಹುದಾದ ಸ್ಥಾನಮಾನದ ಬಗ್ಗೆ ಅಂದಾಜು ಮಾಡಬಹುದಾಗಿದೆ.

1) ಪೋಚಿಮಯ್ಯ: ವಿನಯಾದಿತ್ಯನು ಆಳುತ್ತಿದ್ದ ಬೀರಾಪೂರಿನ ಮಂತ್ರಿ.
2) ನಾಗದೇವ: ವಿನಯಾದಿತ್ಯನ ಯುದ್ಧ ಮತ್ತು ಶಾಂತಿಯ ಮಂತ್ರಿ.
3) ಚಾಂದಿಮಯ್ಯ: ವಿನಯಾದಿತ್ಯನ ಖಜಾಂಚಿ.
4) ಮಾನಹೆಗ್ಗಡೆ: ಈರೆಯಂಗ ಮಹಾಮಾತ್ಯನ ಪ್ರಧಾನಿ, ಕುಂದರಾಮಯ್ಯ.
5) ಗಂಗರಾಜ: ವಿಷ್ಣುವರ್ಧನನ ಸೇನಾಧಿಪತಿ. ಇವನ ಮಗ ಬೊಪ್ಪನೂ ಸೇನಾನಿಯೇ ಇದರಿಂದ ಹುದ್ದೆಯು ವಂಶಪಾರಂಪರ್ಯವೆಂದು ತೋರುವುದು.[16]
6) ಮರಿಯಾನೆ ಮತ್ತು ಅವನ ಸಹೋದರ ಭರತ- ಇಬ್ಬರೂ ಸರ್ವಾಧಿಕಾರಿಯ ಹುದ್ದೆಯಲ್ಲಿದ್ದರು.[17]
7) ಬೋಕಣ್ಣ: ವಿಷ್ಣುವರ್ಧನನ ಸೇನಾನಿ ಮಹಾಮಂತ್ರಿ.
8) ರಾಯನ ದಂಡನಾಥ: ರಾಜ ವಿಷ್ಣುವರ್ಧನನ ಲೆಕ್ಕಿಗನಾಗಿದ್ದನು.[18]
9) ಮೊದಿರಾಜ: ರಾಜ ವಿಷ್ಣುವರ್ಧನನ ಲೆಕ್ಕಿಗ ಸಾಮಂತನಾಗಿದ್ದನು.[19]
10) ಬಿವರಿದೆ: ಮುದುಗೆರೆಯ ರಾಜ್ಯಪಾಲ.[20]
11) ಈಚಣ್ಣ ದಂಡನಾಯಕ: ವಿಷ್ಣುವರ್ಧನನ ಮಂತ್ರಿ.[21]
12) ಬೊಮ್ಮಗಂಡ: ರಾಜ್ಯಪಾಲ ಮತ್ತು ಮಂತ್ರಿ.[22]
13) ಸರಿಗೆಯ ನಾಯಕ ಮಂತ್ರಿ, ಇವನ ಕೈಕೆಳಗಡೆ ಸುಂಕದ ಅಧಿಕಾರಿ.[23]
14) ದೇವಪ್ಪ ನಾಯಕ: ಸುಂಕ ಹೆಗ್ಗಡೆ.[24]
15) ಹುಲಿಗೆರೆ ಘಟ್ಟ: ಮೊದಲನೇ ನರಸಿಂಹನ ಕೈಕೆಳಗೆ ಸಾಮಂತ
16) ಮಹಾಸಾಮಂತ ಮಾಚಯಣ್ಣ: ಅರಕೆರೆ, ಕಾಲಿಗುಂದ, ಬೆಲುವಲಿ ಕರವೀಡಿ, ಹಿಂಚನೂರು, ಮನ್ನಂಬರು, ಕರಡಿಹಾಳು, ಆಲರಿಗುಪ್ಪ, ಮತ್ತು ಕುಂದೂರು ಇವುಗಳನ್ನು ಆಳುತ್ತಿದ್ದನು.[28]
17) ಮಹಾಸಾಮಂತ ಸುರಗರಸ: ಅರಸೀಕೆರೆಯಲ್ಲಿ ವಾಸಿಸುತ್ತಿದ್ದನು.[29]
18) ನರಸಿಂಹ-ಮೂವರು ಸಹೋದರರು-ಹುಲ್ಲ ಲಕ್ಷ್ಮರಸ ಅಮರೇಶ್ವರ ದೇಶವನ್ನು ಒಟ್ಟಿಗೆ ಆಳುತ್ತಿದ್ದರು. (ಒಂದೇ ಕುಟುಂಬದಲ್ಲಿ ಮೂವರು ಅಧಿಕಾರಿಗಳು).[30]
19) ಹೆಗಡೆ ಲಕುಮಯ್ಯ – ನರಸಿಂಹನ ಮಹಾಮಂತ್ರಿ.[31]
20) ಕೆರೆಯ ಪದ್ಮರಸ – ನರಸಿಂಹನ ಮತ್ತೊಬ್ಬ ಮುಖ್ಯಮಂತ್ರಿ.[32]
21) ಈರೆಯಂಗಮಯ್ಯ ದಂಡನಾಯಕ – ನರಸಿಂಹನ ಮಂತ್ರಿ.[33]
22) ಹಿರಿಯ ಬಮ್ಮೇಯ – ಮಹಾಮಂತ್ರಿ ಮತ್ತು ಸೇನಾಧಿಪತಿ, ಗೌಲ, ಚೋಳ, ಚೇರ, ಪಾಂಡ್ಯ ಇವರನ್ನು ಸೋಲಿಸಿದನು ಮತ್ತು ಇರಂಗೊಳ ಇವನ ಕೈ ಕೆಳಗೆ

ಸೋಮನಾಥ ಘಸನೆ ಇದ್ದನು. ಮಹಾದೇವ ನಾಯಕ – ಮಾಗರೆ–ಮುನ್ನೂರು–ನಲ್ಲಿ ಕಲಿಕಟ್ಟೆಯನ್ನು ಆಳುತ್ತಿದ್ದನು. ಮಹಾಮಂತ್ರಿಯಾದ ಮಲ್ಲಯ್ಯನು ಅತಿಗನೊರನ್ನು ಆಳುತ್ತಿದ್ದನು.[34]

23) ಸರ್ವಾಧಿಕಾರಿ ಮತ್ತು ಮುಖ್ಯಮಂತ್ರಿಗಳು–ನಾಕ ಇವನೊಬ್ಬ ಉತ್ಸಾಹೀ ಶೈವನಾಗಿದ್ದನು.[35]

24) ದೇವಪಯ್ಯ ದಂಡನಾಯಕ–ಚಾವಿಮಯ್ಯ ಮಹಾಮಂತ್ರಿ ಮತ್ತು ಹಿರಿಯ ಸೈನ್ಯಾಧಿಕಾರಿ.[36]

25) ಮಹಾಮಂತ್ರಿ ಹರಗಡೆ ಶಿವರಾಜ ಮತ್ತು ಮಂತ್ರಿ ಮಲ್ಲಿದೇವ.[37]

26) ಬಿಟ್ಟಿ ಸಾಮಂತ ತನ್ನ ಪ್ರಾಂತ್ಯದ ಆಡಳಿತದಲ್ಲಿ ಇವನ ಮಗನಾದ ಬಳೆಯ ಸಾಮಂತ ಇವನಿಗೆ ಸಹಾಯಕನಾಗಿದ್ದನು.[38]

27) ಬೆಳ್ಳಪ್ಪಯ್ಯ ನಾಯಕ – ಅಂಗರಕ್ಷಕ – ಮುಂದೆ ನಾಯಕನಾದನು.[39]

28) ಬಲ್ಲಾಳ – ತನ್ನ ಮಹಾಮಂತ್ರಿಯಾದ ಸರ್ವಾಧಿಕಾರಿಯಿಂದ ಮತ್ತು ಸೇನಾಧಿಪತಿಯಾದ ಮಹಾಪಾಸಯಿತ ಮಾಧವ ದಂಡನಾಯಕ ಇವನಿಗೆ ಸಹಾಯಕನಾಗಿದ್ದನು.[40]

29) ಮಹಾಮಂತ್ರಿ – ಹಿರಿಯ ಬಲ್ಲಾಳ ದಂಡನಾಯಕ–ಕ್ರಿ.ಶ. 1214ರಲ್ಲಿ ಎರಡನೇ ಬಲ್ಲಾಳನ ರಾಜ್ಯಪಾಲನಾಗಿ, ಬೆಮ್ಮತುರ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಹೊಳಲ್ಕೆರೆಯಲ್ಲಿ ಒಂದು ದೇವಾಲಯಕ್ಕಾಗಿ ಅನುಕೂಲ ಮಾಡಿಕೊಟ್ಟನು.[41]

30) ಹೊಳಲ್ಕೆರೆ ಮತ್ತು ಹೊನಕುಂಡ ಮೂವತ್ತೂರು ಮಹಾ ಪಾಳೆಯಗಾರನಾದ (ಹಿರಿಯ ಬಲ್ಲಾಳ ದಂಡನಾಯಕನಿಂದ) ಪಲ್ಲವ ವಂಶದ ರಾಜಕುಮಾರ ಮಾಚಿದೇವ – ಇವರಿಂದ ಆಳಲ್ಪಡುತ್ತಿದ್ದವು. ಮಾಚಿದೇವನು ಕ್ರಿ.ಶ. 1205ರಲ್ಲಿ ಮಾರೆಯ ನಾಯಕ ಅಗ್ಗಪ್ಪ ವೆಗ್ಗಡೆ ಮತ್ತು ರಾಜ ತನಿಖಾಧಿಕಾರಿ, ವಾಮನ ಕ್ರಾಮಿತ ಸರಕಾರೀ ಕೆಲಸದಲ್ಲಿ ಇವರೆಲ್ಲರ ನೆರವನ್ನು ಪಡೆದಿದ್ದನು.[42]

31) ಕ್ರಿ.ಶ. 1217ರಲ್ಲಿ ಅನ್ನಮರಸ ಹೊಳಲ್ಕೆರೆಯನ್ನು ಆಳುತ್ತಿದ್ದನು. ಸುಮಾರು ಅದೇ ಸಮಯದಲ್ಲಿ, ನಾನಂಬವಾಡಿ ನಾಡಿನ ಶಿರೋ ರತ್ನವಾದ ಬಲ್ಲಾಳ ನಲ್ಲಿಶೆಟ್ಟಿಯು ಇದ್ದನು.[43]

32) ಕ್ರಿ.ಶ. 1189 ರಲ್ಲಿ ಬಲ್ಲಾಳನ ವಿರುದ್ಧ ಸಮರ ಸಾರಿ, ಸಂಕಮನ ಸೈನ್ಯಾಧಿಕಾರಿಯಾದ ಕವನಯ್ಯನು ಸಂತಲಿಗೆ ಮತ್ತು ಬನವಾಸಿಯನ್ನು ಆಕ್ರಮಿಸಿಕೊಂಡಿದ್ದನು. ಹೀಗೆ ಆಕ್ರಮಿಸಲ್ಪಟ್ಟಿದ್ದ ಈ ಪ್ರಾಂತ್ಯಗಳು ಈಗ ಹೊಯ್ಸಳ ಮಂತ್ರಿಯಾದ ಈರಗೆ ದಂಡನಾಯಕನ ಆಳ್ವಿಕೆಗೆ ಒಳಪಟ್ಟಿದ್ದವು.[44]

33) ಕ್ರಿ.ಶ. 1168ರಲ್ಲಿ ಕಳಚೂರ್ಯ ಸೈನ್ಯಾಧಿಕಾರಿ ಕೇಸಿಮಯ್ಯನು ಹಾನಂಗಲ್ ಐದುನೂರು ಮತ್ತು ಬನವಾಸಿ 12,000 ಈ ಪ್ರಾಂತ್ಯಗಳಿಗೆ ರಾಜ್ಯಪಾಲನಾಗಿ

ನೇಮಿಸಲ್ಪ ಟ್ಟಿದ್ದನು. ಕಳಚೂರ್ಯ ಅರಸರು ಬನವಾಸಿಯ ರಾಜ್ಯಪಾಲನಾಗಿ ಸೇನಾನಿ ಕೇಸಿಮಯ್ಯನನ್ನು ನೇಮಿಸಿದರು. ಕ್ರಿ.ಶ. 1196ರಲ್ಲಿ ಕೇಸಿಮಯ್ಯನು ಕಳಚೂರ್ಯರ ಕೈಕೆಳಗೆ ಬನವಾಸಿ ನಾಡಿನ ಹೆಗ್ಗಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದನು.[45]

34) ಸೇನಾಧಿಕಾರಿ ಸಹನಿ ಮಹಾಮಂಡಲೇಶ್ವರ ಬಂಕನಾಯಕನ ಅಳಿಯನಾಗಿದ್ದನು.[46]
35) ಸೇನಾಪತಿ ಬ್ರಹ್ಮ–ಸೋಮೇಶ್ವರನ ಸೇನಾಧಿಪತಿಯಾಗಿದ್ದನು.[47]
36) ಸೇನಾಧಿಪತಿ ದಾಸವಂತ ದನ್ನಾಯಕ ಉದ್ದರೆ ಕೋಟೆಯಲ್ಲಿ ಬನವಾಸಿಯ ಸರ್ವಾಧಿಕಾರಿ ಯಾಗಿದ್ದನು.[48]
37) ಕುವಲ ಲಕ್ಷ್ಮ ಬಲ್ಲಾಳನ ಮಂತ್ರಿಯಾಗಿದ್ದನು.[49]
38) ಕೇಸಿಮಯ್ಯ–ಒಬ್ಬ ಗಣ್ಯವ್ಯಕ್ತಿ ಕ್ರಿ.ಶ. 1175ರಲ್ಲಿ ಮನೆ ವಾರ್ತೆ ನಡೆಸುವ ಅಧಿಕಾರಿ ಯಾಗಿದ್ದನು.[50]
39) ಕೇತಮಲ್ಲ ನಾಯಕನ ಮಗನು ನರಸಿಂಹನಾಯಕನಾಗಿದ್ದನು.51
40) ಪದುಮಲಾದೇವಿ ಹೊಸಹಡಂಗಿಲಿಯಲ್ಲಿ ಆಳುತ್ತಿದ್ದಳು. (ಈಗಿನ ಹಿರೇ ಹಡಗಲ್ಲಿ) ಅವಳ ಆಳ್ವಿಕೆಯಲ್ಲಿ ಮಹಾಮಂತ್ರಿ ಶ್ರೀಕರ್ಣ, ಸಾಮಾನ್ಯ ತನಿಖಾಧಿಕಾರಿಗಳು ಅವಳಿಗೆ ಸಹಾಯಕರಾಗಿದ್ದರು.[52]
41) ಸಾಮಂತ ಕಡೆಯ ನಾಯಕ ಕೆರೆಗೋಡು ನಾಡನ್ನು ಆಳುತ್ತಿದ್ದನು.[53]
42) ಚಂದ್ರಮೌಳಿ ಮಹಾಪ್ರಧಾನಿಯಾಗಿದ್ದನು ಮತ್ತು ಅರಮನೆಯ ಮುಖ್ಯಾಧಿಕಾರಿ ಯಾಗಿದ್ದನು.[54]
43) ಮೂರನೇ ನರಸಿಂಹನ ಕಾಲದಲ್ಲಿ ಕೇಸೀ ರಾಜನು ಮಹಾಮಂತ್ರಿಯಾಗಿದ್ದನು ಮತ್ತು ಎಪ್ಪತ್ತೆರಡು ಅಧಿಕಾರಿಗಳು ಅವನ ಕೈ ಕೆಳಗಿದ್ದರು.[55]
44) ಅಪ್ಪಣ್ಣ ದನ್ನಾಯಕ, ಸಮುದ್ರ, ಗೋಪಯ್ಯ ದನ್ನಾಯಕ, ಮತ್ತು ಅದ್ದಯಾಡ ಹರಿಹರ ದನ್ನಾಯಕ–ಇವರು ಎರಡನೇ ನರಸಿಂಹನ ಕಾಲದ ಮಹಾಸೈನಿಕ ಅಧಿಕಾರಿಗಳಾಗಿದ್ದರು.[56]
45) ಎರಡನೇ ನರಸಿಂಹನ ಕಾಲದಲ್ಲಿ, ಬಿಲ್ಲಯ್ಯ ದನ್ನಾಯಕ, ಬೆಟ್ಟಯ್ಯ ದನ್ನಾಯಕರು ಅಧಿಕಾರಿಗಳಾಗಿದ್ದರು.[57]
46) ಬೊಮ್ಮನ ದಂಡನಾಯಕ ಎರಡನೇ ನರಸಿಂಹನ ಕಾಲದ ಯುದ್ಧ ಮತ್ತು ಶಾಂತಿಯ ಮಹಾಮಂತ್ರಿಯಾಗಿದ್ದನು.[58]
47) ಮೂರನೇ ನರಸಿಂಹನ ಕಾಲದಲ್ಲಿ ಗಣನೀಯ ಮಂತ್ರಿಯಾಗಿದ್ದವನು ಪೆರುಮಲೆ ದನ್ನಾಯಕ.[59]
48) ರಾಮನಾಥನ ಮಂತ್ರಿಗಳು ಸಿಕ್ಕದೇವನ ದನ್ನಾಯಕರ ಅನ್ನಾಮಲೈದೇವರ್, ಮಹಾಮಂತ್ರಿ ಮತ್ತು ಮಾಂಡಲೀಕರ ಸಭಾಸದಸ್ಯ, ಮಹಾಪ್ರಧಾನ ವೀರಯ್ಯದನ್ನನಾಥ, ಮಹಾ ಮಂತ್ರಿಗಳು ನೀಚಯ್ಯ ದಣ್ಣಾಯಕ ಮತ್ತು ಕಂಬಯ್ಯ ದಣ್ಣಾಯಕ ಇವರುಗಳಾಗಿದ್ದರು.[60]

49) ಬಳ್ಳಪ್ಪ ದಣ್ಣಾಯಕ ಮತ್ತು ಸಿಂಗೇಯ ದಣ್ಣಾಯಕ-ಇವರುಗಳು ನಾಲ್ಕನೇ ಬಲ್ಲಾಳನ ಮಹಾಮಂತ್ರಿಗಳಾಗಿದ್ದರು.[61]

ಮೇಲಿನ ಪಟ್ಟಿಯಿಂದ ತಿಳಿದುಬರುವುದೇನೆಂದರೆ, ದಂಡನಾಯಕ ಹುದ್ದೆಯಲ್ಲಿ ಒಬ್ಬ ವ್ಯಕ್ತಿಯ ಸ್ಥಾನವು ಅವರ ಬಿರುದುಗಳನ್ನು ಅಥವಾ ಆ ವ್ಯಕ್ತಿಯು ಇರುವ ಹುದ್ದೆಯ ಮೇಲೆ ನಿರ್ಧರಿಸಲ್ಪಟ್ಟಿತ್ತೆಂದು ತಿಳಿದು ಬರುತ್ತದೆ. ಹೊಯ್ಸಳರ ಕಾಲದಲ್ಲಿ ಅತ್ಯಂತ ಸಾಮಾನ್ಯ ಹುದ್ದೆ ಗಳೆಂದರೆ, ನಾಯಕ, ದಂಡನಾಯಕ, ಸಾಮಂತ, ಮಹಾಸಾಮಂತ ಎಂದು ತಿಳಿದು ಬರುತ್ತದೆ.

## ಅಡಿಟಿಪ್ಪಣಿಗಳು

1) E.C. VIII Sb. 348
2) E.C. XII TM 9
3) E.C. VI, Kd. 32
4) E.C. XII, TP 101
5) E.C. V AK 41
6) E.C. II SB 349
7) E.C. V, Hn 66
8) Kannada Kavi Charita P.245
9) E.C. XII TM 38
10) E.C.V AK 42
11) E.C. VI, Kd. 57
12) E.C. V Cn 187
13) E.C. IV Kp 36
14) E.C. XII, Ck 43
15) E.C. V, Cn. 210
16) E.C. XII C.K. 36
17) E.C. XI HK 2
18) E.C. XI Ed. 23
19) E.C. HK 123
20) Rice, Mysore Inscriptions, P. 103
21) Rice, Mysore Inscriptions, P. 117
22) E.C. VII, Sk 212
23) IA, II, p. 299
24) E.C. VIII SB 135
25) E.C. V, BI, 112
26) MAR, 1926, p. 61
27) E.C. V Cn. 205
28) Madras Inscriptions I p. 277
29) E.C. V Cn 265
30) E.C. IV Ng 32
31) E.C. V 12, 54

32) E.C. Cn 242
33) E.C. Cn. 242
34) E.C. V Cn 237
35) Rice Mysore Inscriptions
36) E.C. IX NI 63
37) E.C. XI Cd. 4

# ಅಧ್ಯಾಯ 6

# ಹೊಯ್ಸಳರ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ದಂಡನಾಯಕರ ಸಾಂಸ್ಕೃತಿಕ ಕೊಡುಗೆ

## 6.1 ಧರ್ಮ

ಸಾಮಾನ್ಯವಾಗಿ ಶಿಲಾಶಾಸನಗಳಲ್ಲಿ ಆಳುವ ವರ್ಗದ ಧಾರ್ಮಿಕ ನಂಬಿಕೆಗಳ ಬಗ್ಗೆ ಸ್ಪಷ್ಟವಾದ ಮಾಹಿತಿ ಏನೂ ದೊರಕುವುದಿಲ್ಲ. ದಂಡನಾಯಕರ ಸದಸ್ಯರ ವಯುಕ್ತಿಕ, ಧಾರ್ಮಿಕ ನಂಬಿಕೆಗಳೇನೇ ಇರಲಿ ತಮ್ಮ ರಾಜಕೀಯ ಅಧಿಕಾರವನ್ನು ಒಗ್ಗೂಡಿಸಲು, ತಮ್ಮ ತಮ್ಮ ಆಡಳಿತ ಕ್ಷೇತ್ರಗಳಲ್ಲಿ ಇತರ ವಿವಿಧ ಪಂಗಡ ಒಳಪಂಗಡಗಳ ಗುಂಪಿನ ಜನರ ಧಾರ್ಮಿಕ ಭಾವನೆಗಳಿಗೆ ಧಕ್ಕೆಯಾಗದ ರೀತಿಯಲ್ಲಿ ರಾಜ್ಯದ ಎಲ್ಲಾ ಪ್ರಮುಖ ಧರ್ಮದವರಿಗೂ ಸಮಾನ ಬೆಂಬಲ ನೀಡಿದರು. ಆಯಾ ಕ್ಷೇತ್ರಗಳ ದಂಡನಾಯಕರ ಧಾರ್ಮಿಕ ನೆಲೆಗಟ್ಟನ್ನು ಕುರಿತಂತೆ, ಶಿಲಾಶಾಸನ ಗಳಲ್ಲಿ ಸೂಚಿಸಿರುವಂತೆ, ಇವುಗಳ ಸಾಕ್ಷ್ಯವು, ಹನ್ನೆರಡು ಮತ್ತು ಹದಿಮೂರನೆಯ ಶತಮಾನ ಗಳಲ್ಲಿ ಬಹಳ ಗಣನೀಯವಾದುದು. ಈಗ ದೊರೆತಿರುವ ಸಾಕ್ಷ್ಯವನ್ನು ಜೈನಧರ್ಮ, ವೈಷ್ಣವ ಧರ್ಮ, ಶೈವಧರ್ಮ ಮತ್ತಿತರ ಪಂಗಡಗಳ ಅಡಿಯಲ್ಲಿ ವರ್ಗೀಕರಿಸಲಾಗಿದೆ.

ಧರ್ಮವು ಭಾರತೀಯ ಸಂಸ್ಕೃತಿಯ ಜೀವಾಳವಾಗಿತ್ತು. ಅದು ಹೆಚ್ಚು ಕಡಿಮೆ ಜನಜೀವನದ ಪ್ರತಿ ನಡೆಯಲ್ಲೂ ಮನೆ ಮಾಡಿತ್ತು. ಈ ಬಸದಿಗಳು ಮತ್ತು ದೇವಸ್ಥಾನಗಳು ಜನರ ಧಾರ್ಮಿಕ ಉತ್ಸಾಹದ ಸ್ಪಷ್ಟವಾದ ಸಂಕೇತಗಳಾಗಿದ್ದವು. ಬಸದಿಗಳ ಮತ್ತು ಮಂದಿರಗಳ ನಿರ್ಮಾಣವು ಸಮಾಜದ ವಿವಿಧ ವರ್ಗಗಳಿಂದಲೂ ಪ್ರೋತ್ಸಾಹವನ್ನು ನಡೆದಿತ್ತು. ಒಂದು ರೀತಿಯಲ್ಲಿ ಈ ಬಸದಿಗಳ ಮತ್ತು ಮಂದಿರಗಳ ನಿರ್ಮಾಣವು, ಹೊಯ್ಸಳರಸರಿಂದ ಮಾತ್ರವಲ್ಲ, ಮತ್ತಿತರ ಆಡಳಿತಾಧಿಕಾರಿಗಳೆಲ್ಲರಿಂದಲೂ ಸಹ, ಸಾಮ್ರಾಜ್ಯದಲ್ಲಿ ರಾಜಕೀಯ ಅಧಿಕಾರದ ಒಗ್ಗೂಡಿಸುವಿಕೆಗೂ ಕೊಡುಗೆಯನ್ನು ನೀಡಿತು. ಅಲ್ಲದೆ ಅದೊಂದು ರೀತಿಯ ಪರೋಕ್ಷವಾಗಿ, ಆರ್ಥಿಕ ಚಟುವಟಿಕೆ ಗಳಿಗೂ ಚಾಲನೆ ಕೊಡುವ ಹೂಡಿಕೆಯಾಗಿತ್ತು. ಏಕೆಂದರೆ ಅನೇಕ ಹೊಯ್ಸಳ ಮಂದಿರಗಳು ಮತ್ತು ಬಸದಿಗಳು ವ್ಯಾಪಾರ ಮಾರ್ಗಗಳಲ್ಲಿಯೇ ಕಟ್ಟಲ್ಪಟ್ಟಿದ್ದವು.

ಈ ಕೆಳಕಂಡ ಶಿಲಾಶಾಸನಗಳಿಂದ ಆಯ್ದ ಕೆಲವು ಭಾಗಗಳು, ದಂಡನಾಯಕರ ವರ್ಗಕ್ಕೆ ಸೇರಿದ ಸ್ತ್ರೀ ಪುರುಷರೆಲ್ಲರೂ ಹೇಗೆ ಬಸದಿಗಳನ್ನು ನಿರ್ಮಿಸಿ, ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಜೈನಧರ್ಮವನ್ನು ಪ್ರೋತ್ಸಾಹಿಸಿದರೆಂಬುದು ತಿಳಿದು ಬರುತ್ತದೆ.

ಸೇನಾಧಿಪತಿಯಾದ ಗಂಗರಾಜನು ಚೋಳರ ಸೇನಾಧಿಪತಿಯಾದ ಆದಿಮನ್ನನ ವಿರುದ್ಧ ತಲಕಾಡಿನಲ್ಲಿ ದಂಡೆತ್ತಿ ಹೋದನು ಮತ್ತು ನಿಷ್ಠಾವಂತ ಜೈನನಾದ ಗಂಗರಾಜನು ಗಂಗವಾಡಿ ಪ್ರದೇಶದ ಎಲ್ಲಾ ಬಸದಿಗಳನ್ನು ರಿಪೇರಿ ಮಾಡಿದನು. ಶ್ರವಣಬೆಳಗೊಳದಲ್ಲಿ ಎರಡು ಜೈನ ಬಸದಿಗಳನ್ನು ಕಟ್ಟಿಸಿ ಅದನ್ನು ತನ್ನ ತಾಯಿಯಾದ ಪೋಚವ್ವೆಗಾಗಿ ಸಮರ್ಪಿಸಿದನು.[1]

ಮತ್ತೊಂದು ಶಿಲಾಲಿಪಿಯು ಅವನ ಪತ್ನಿಯಾದ ಲಕ್ಷ್ಮಿಯು ಅದೇ ಸ್ಥಳದಲ್ಲಿ ಬಸದಿಯೊಂದನ್ನು ಕೆತ್ತಿಸಿದುದಾಗಿ ದಾಖಲಿಸುತ್ತದೆ.[2]

ಗಂಗರಾಜನ ಮಗನಾದ ಬೊಪ್ಪದೇವನೂ ಸಹ ಒಬ್ಬ ಮಹಾನ್ ಕಲಾ ಪೋಷಕನಾಗಿದ್ದನು. ಅವನು ಶ್ರವಣಬೆಳಗೊಳದಲ್ಲಿ "ತ್ರೈಲೋಕ್ಯರಂಜನ" ಬಸದಿಯನ್ನು ಕಟ್ಟಿಸಿದನು.[3]

ಪುನಿಸಾಮಯ್ಯ ವಿಷ್ಣುವರ್ಧನನ ಸೇನಾಧಿಪತಿಯು, ಬಸ್ತಿ, ಬಸ್ತಿಹಳ್ಳಿ, ಮತ್ತು ಚಾಮರಾಜ ನಗರಗಳಲ್ಲಿ ಮೂರು ಬಸದಿಗಳನ್ನು ಕಟ್ಟಿಸಿದನು. ಮತ್ತೊಬ್ಬ ಸೇನಾಧಿಪತಿಯಾದ ವಿಷ್ಣುವು ದ್ವಾರಸಮುದ್ರದಲ್ಲಿ ಜಿನಾಲಯವೊಂದನ್ನು ಕಟ್ಟಿಸಿದನು.[4]

ವರ್ತಕರೂ ಸಹ ತಮ್ಮ ದಾನಧರ್ಮದ ಕಾರ್ಯಗಳಿಗೆ ಹೆಸರುವಾಸಿಯಾಗಿದ್ದರು. ಹಳೇ ಬೀಡಿನಲ್ಲಿ ಪ್ರಸಿದ್ಧವಾದ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದ ಕೇತಮಲ್ಲ, ಹೊಯ್ಸಳ ಶೆಟ್ಟಿಯಂತಹ ಅತ್ಯಂತ ಶ್ರೀಮಂತ ವರ್ತಕರು ಮಾತ್ರ ತಮ್ಮದೇ ಆದ ಒಂದು ಸ್ವಂತ ಮಂದಿರವನ್ನು ಕಟ್ಟಲು ಹಣ ಒದಗಿಸುವಷ್ಟು ವಿಫಲವಾದ ಸಂಪತ್ತನ್ನು ಹೊಂದಿದ್ದರು. ಅಂತಹ ವರ್ತಕರು ಸಾಮಾನ್ಯವಾಗಿ ದೊಡ್ಡ ವ್ಯಾಪಾರ ಸಂಸ್ಥೆಗಳನ್ನು ಹೊಂದಿದ್ದು, ಇತರ ಭಾರತೀಯ ರಾಜ್ಯಗಳೊಂದಿಗೆ ಮಾತ್ರವಲ್ಲ, ಆಗಾಗ್ಗೆ ಇತರ ದೇಶಗಳೊಂದಿಗೂ ವ್ಯಾಪಾರ ಸಂಬಂಧ ಹೊಂದಿದ್ದರು.

ಮಂದಿರಗಳ ನಿರ್ಮಾಣವು ಇನ್ನೂ ಹೆಚ್ಚಿನ ಉಪಯುಕ್ತ ಉದ್ದೇಶಗಳನ್ನು ಹೊಂದಿರುತ್ತಿತ್ತು. ಕಾರಣ, ಅದೊಂದು ರೀತಿಯ ರಾಜನ ವೈಭವವನ್ನೂ, ಐಶ್ವರ್ಯವನ್ನೂ ತೋರುವ ಮಾರ್ಗವಾಗಿತ್ತು, ಹಾಗೆಯೇ ಅವನ ಪ್ರಭುತ್ವವನ್ನು ಸಾರುತ್ತಿತ್ತು.

ವಿಷ್ಣುವರ್ಧನನ ಆಳ್ವಿಕೆಯ ವರ್ಷಗಳು, ವಿಶಾಲವಾದ ಸಾಮ್ರಾಜ್ಯ ವಿಸ್ತರಣೆಯ ಪ್ರಾರಂಭ ವನ್ನು ಕಂಡಿತಲ್ಲದೆ, ದೇವಾಲಯಗಳ ನಿರ್ಮಾಣದ ಮೊದಲ ಬೃಹತ್ ಪ್ರಮಾಣದ ಕಾರ್ಯಕ್ರಮ ವನ್ನೂ ಕಂಡಿತು. ದೊಡ್ಡ ದೇವಾಲಯಗಳು ಈ ಕೇಂದ್ರದಿಂದ ಸುಮಾರು 40 ಕಿ.ಮೀ.ಗಳ ತ್ರಿಜ್ಯದೊಳಗೆ ಕ್ರಿ.ಶ. 1113ರಲ್ಲಿ ದೊಡ್ಡ ಗದ್ದವಳ್ಳಿ ಎಂಬಲ್ಲಿ, 1117ರಲ್ಲಿ

ಬೇಲೂರಿನಲ್ಲಿ, 1120ರಲ್ಲಿ ಆನೇ ಕನ್ನಂಬಾಡಿಯಲ್ಲಿ, 1121ರಲ್ಲಿ ಹಳೇಬೀಡುವಿನಲ್ಲಿ, 1113ರಲ್ಲಿ ಮೊಸಲೆ ಎಂಬಲ್ಲಿ ಹನ್ನೆರಡನೆಯ ಶತಮಾನದ ಪ್ರಾರಂಭದಲ್ಲಿ ಕಟ್ಟಲ್ಪಟ್ಟವು. ಇವುಗಳಲ್ಲಿ ಮರಳೆಯಲ್ಲಿ ಕೀರ್ತಿ ನಾರಾಯಣ ಮಂದಿರ ಮಾತ್ರ ಈ ಪ್ರದೇಶದ ದಕ್ಷಿಣ ಮತ್ತು ವಾಯುವ್ಯ ಭಾಗದಲ್ಲಿ ಕಟ್ಟಲ್ಪಟ್ಟಿತು.[5]

ಹೀಗೆ, ಧರ್ಮರಕ್ಷಣೆ ಮತ್ತು ಶಾಂತಿಪಾಲನೆ, ಶಿಸ್ತು, ವಿಸ್ತರಣೆ, ಕ್ಷೇಮಾಭ್ಯುದಯ ಮತ್ತು ಸಮೃದ್ಧಿ ಇವು ರಾಜನ ಮುಖ್ಯಪಾತ್ರಗಳಾಗಿದ್ದವು. ಈ ಎಲ್ಲಾ ವಿಚಾರಗಳು, ರಾಜ ಮತ್ತು ದೇವಾಲಯುಗಳ ನಡುವೆ ಇದ್ದ ಸಂಬಂಧದಲ್ಲಿ ಅಡಕವಾಗಿದ್ದವು. ಈ ಕೇಂದ್ರ ಸಂಬಂಧದ ಸುತ್ತ ಮಾತ್ರವೇ ಇತರ ಎಲ್ಲಾ ವಿಚಾರಗಳ ಮೂಲವೂ ಮತ್ತು ಅದರ ಮಹತ್ವವೂ ಹೆಣೆದು ಕೊಂಡಿದ್ದುದು. ಈ ಸಂಬಂಧದ ಮುಖ್ಯ ವಿಚಾರವೆಂದರೆ, ರಾಜನ ಪಾತ್ರವು ಒಬ್ಬ ತ್ಯಾಗಿಯಾಗಿ ಅಥವಾ ಒಬ್ಬ ಪೂಜಾರಿಯಾಗಿ ಅಥವಾ ಒಬ್ಬ ಉಪಾಸಕನಾಗಿ ಇರುತ್ತಿದ್ದುದು.

ತ್ಯಾಗಿಯೂ ಔದಾರ್ಯದ ಮೂರ್ತಿಯಾಗಿ ರಾಜನ ಸ್ಥಾನವು ಮಂದಿರಗಳ ನಿರ್ಮಾಣದ ರೂಪದಲ್ಲಿ ಮಂದಿರಗಳಿಗಾಗಿ ರಾಜನ ಉದಾರವಾದ ದಾನ, ಭೂದಾನ, ತೆರಿಗೆಗಳ ರದ್ದು ಅಲ್ಲದೆ ವಿದ್ವಾಂಸರಾದ ಬ್ರಾಹ್ಮಣರಿಗೆ ನೆಲೆ, ಆಶ್ರಯ ಈ ಎಲ್ಲ ಕ್ರಿಯೆಗಳಿಗೂ ದಾರಿ ಮಾಡಿತ್ತು.

ದೇವಾಲಯಗಳನ್ನು ನಿರ್ಮಿಸಿದ ಈ ಆಡಳಿತಾಧಿಕಾರಿಗಳು ದೇವಾಲಯಗಳ ಪೋಷಕರಾಗಿ, ವಾಸ್ತುಶಿಲ್ಪಗಳಿಗೆ ಮತ್ತು ಶಿಲ್ಪಗಳಿಗೆ ಅವರ ಕೆಲಸಕ್ಕೆ ಹಣ ಪಾವತಿಸುವುದರ ಮೂಲಕ ಮರು ಹಂಚಿಕೆಯ ವಿಧಾನವನ್ನು ಮುಂದುವರೆಸಿದರು.

## 6.2 ಶೈವ ದೇವಸ್ಥಾನಗಳಿಗೆ ದಾನಿಗಳಾದ ದಂಡನಾಯಕರು

1) ಮಹಾಮಂತ್ರಿಯಾದ ಮನ್ನೆ ....... ಮತ್ತು ಅನೇಕ ಕರನಮ್ಮರ ಮನಲ್ಕೆರೆ ಅಗ್ರಹಾರಕ್ಕೆ ಬಂದ ನಂತರ ಕಡಂಬಾಲಿಗೆ ಸಾವಿರದಲ್ಲಿ... ಮೂಲಸ್ಥಾನ ದೇವರಿಗೆ, ತೆರಿಗೆ ರಹಿತ, ಭೂಮಿಯನ್ನು ದಾನವಾಗಿ ನೀಡಿ, ಒಂದು ಗಾಡಿ ಎಣ್ಣೆ ಗಿರಣಿ, ಒಂದು ಕೈ ಎಣ್ಣೆ ಗಿರಣಿ, ಮತ್ತು ನಾಲ್ವರು ನರ್ತಕಿಯರನ್ನು ಉಡುಗೊರೆಯಾಗಿ ಕೊಟ್ಟರು.[6]
2) ಹುಲ್ಲರಸ, ಸೋಮೇಶ್ವರ ಮತ್ತು ಮುದ್ದೇಶ್ವರ ದೇವಾಲಯಗಳನ್ನು ಕಟ್ಟಿಸಿ, ಆ ದೇವಾಲಯಗಳಿಗೆ ಭೂದಾನ ನೀಡಲಾಯಿತು.[7]

3) ನರಸಿಂಹ ಹೊಯ್ಸಳ ದೇವನ ಕಾಲದಲ್ಲಿ ಕ್ರಿ.ಶ. 1088ರಲ್ಲಿ ಒಬ್ಬ ಪಾಂಡ್ಯ ಗವುಂಡನು ತನ್ನ ತಾಯಿಯ ಹೆಸರಿನಲ್ಲಿ ಚೋಳೇಶ್ವರ ದೇವರ ಲಿಂಗವನ್ನು ಸ್ಥಾಪಿಸಿದನು.[8]

4) ಕ್ರಿ.ಶ. 1116–17ರ ಶಿಲಾಶಾಸನವೊಂದು, ವಿಷ್ಣುವರ್ಧನನ ಆಳ್ವಿಕೆಗೆ ಸಂಬಂಧಿಸಿದುದಾಗಿದೆ. ಈ ದಾಖಲೆಯಲ್ಲಿಯೂ ಸಹ ಕರೆಕಾಂತಜಿಯನಿಗೆ ದೇವದಾನದ ಹೆಸರಿನಲ್ಲಿ ಭೂಮಿಯನ್ನು ದಾನ ಮಾಡಿರುವ ದಾನಿಗಳಲ್ಲಿ ಒಬ್ಬನಾಗಿ, ದಂಡನಾಯಕ ಪುನಿಸಾಮಯ್ಯನ ಹೆಸರು ಕಂಡುಬರುತ್ತದೆ.[9] ಇದು ಸ್ಪಷ್ಟವಾಗಿ ಶೈವ ದೇವಾಲಯಕ್ಕೆ ಕೊಟ್ಟಿರುವ ದಾನವಾಗಿದೆ ಮತ್ತು ಹೊಯ್ಸಳರಸರ ಕೈ ಕೆಳಗಿನ ಸೇನಾಧಿಕಾರಿಗಳೂ ಸಹ ತೋರುತ್ತಿದ್ದ, ಅನ್ಯಮತ ಸಹಿಷ್ಣುತೆಯ ಉದಾರ ನೀತಿಯನ್ನು ತೋರಿಸುತ್ತದೆ.

5) ರಾಣಿ ಶಾಂತಲಾದೇವಿಯ ಮೈದುನನಾದ ಬಳ್ಳಾಯ–ನಾಯಕ. ಕಬ್ಬಾಳು 1000 ದಲ್ಲಿ ಮಲಿಗೆಯನ್ನು ಆಳುತ್ತಿದ್ದನು. ಅವನು ಗವುಂಡನೊಂದಿಗೆ ಮತ್ತು ಉರ್‌ನ ಐವತ್ತೊಕ್ಕಲು ಇವರೊಂದಿಗೆ ಆ ಸ್ಥಳದ ಕರ್ಮಟೇಶ್ವರ ದೇವರಿಗೆ ಭೂಮಿಯನ್ನು ದಾನವಾಗಿ ನೀಡಿದನು.[10]

6) ಪ್ರಸಿದ್ಧನಾದ ಮಹಾಪ್ರಧಾನ ಲಕುಮಿ ನಾರಾಯಣದೇವ ದೆನ್ನಾಯಕ, ಪೆರುಮಾಲುದೇವ ದನ್ನಾಯಕರ ಪುತ್ರನು ಭೂಮಿಯನ್ನು ರಾಮೇಶ್ವರ ದೇವರಿಗೆ, ಎಲ್ಲಾ ತೆರಿಗೆಗಳಿಂದ ಮುಕ್ತಗೊಳಿಸಿ ದಾನ ಮಾಡಿದನು.[11]

7) ಮಹಾಪ್ರಧಾನ, ದಂಡನಾಯಕ, ಲಿಂಗಪಯ್ಯ ಮಹದೇವ ದೇವರಿಗೆ, ಉಡುಗೊರೆಯನ್ನು ಕೊಟ್ಟನು. ಈ ದೇವರನ್ನು ಕನ್ನಂಬಾಡಿಯ ಕನ್ನಗೊಂಡೇಶ್ವರನೆಂದು ಕರೆಯಲಾಗುತ್ತಿತ್ತು.[12]

8) ಕೇತಮಲ್ಲ ದೋರಸಮುದ್ರದಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ, ಅಲ್ಲಿ ಒಂದು ಮೂರ್ತಿಯನ್ನು ಪ್ರತಿಷ್ಠಾಪಿಸಿ, ಅದಕ್ಕೆ ವಿಷ್ಣುವರ್ಧನ ಎಂದು ಹೆಸರಿಟ್ಟನು ಮತ್ತು ದೇವರಿಗೆ ತಾವರೆಕೆರೆ ಎಂಬ ಗ್ರಾಮವನ್ನು ಎಲ್ಲಾ ತೆರಿಗೆಗಳಿಂದ ಮುಕ್ತಗೊಳಿಸಿ, ದಾನವಾಗಿ ನೀಡಿದನು.[13]

9) ವಿಷ್ಣುವರ್ಧನನು ಆಳುತ್ತಿದ್ದಾಗ, ಕೇರಳ ನಾಯಕನು ನಾಗರಘಟ್ಟದ ದೇವರು ಮಹದೇವನಿಗೆ ಭೂಮಿಯನ್ನು ದಾನ ಮಾಡಿದನು.[14]

## 6.3 ಜೈನ ಧರ್ಮಕ್ಕೆ ದಂಡನಾಯಕರ ಕೊಡುಗೆಗಳು

1) ಗಂಡರಾದಿತ್ಯನ ಮಗನಾದ ಮಹಾಸಾಮಂತನು ದೇವ ಶಾಂತೇಶ್ವರನನ್ನು ಪ್ರತಿಷ್ಠಾಪಿಸಿದನು ಮತ್ತು ತನ್ನ ಗುರು ರುದ್ರಶಿವ ಪಂಡಿತನ ಪಾದಗಳನ್ನು ತೊಳೆಯುತ್ತಾ ಭೂಮಿಯನ್ನು ದಾನವಾಗಿ ನೀಡಿದನು.[15]

2) ಪುನಿಸಾಮಯ್ಯ, ಯುದ್ಧ ಮತ್ತು ಶಾಂತಿಯ ಮಂತ್ರಿ ಬಸದಿಯ ಉತ್ತರದಲ್ಲಿ ಕೆರೆಯ ಕೆಳಗಿನ ಖಂಡುಗ ಭೂಮಿಯನ್ನು ಒಂದು ಬಸದಿಗಾಗಿ ದಾನವಾಗಿ ಕೊಟ್ಟನು.[16]

3) ಗಂಗರಾಜನ ಪತ್ನಿಯಾದ ಲಕ್ಷ್ಮಿಯು ತನ್ನ ಸಹೋದರ ಬಚಣನ ನೆನಪಿಗಾಗಿ ನಿಷಿಧಿಯನ್ನು ಸ್ಥಾಪಿಸಿದಳು.[17]

4) ಮೇಘಚಂದ್ರ ತ್ರೈವಿದ್ಯಾದೇವನ ನೆನಪಿಗಾಗಿ, ಗಂಗರಾಜನ ಪತ್ನಿಯಾದ ಲಕ್ಷ್ಮೀಮತಿ ದಂಡನಾಯಕಿತಿಯಿಂದ ಶಿಲಾಶಾಸನವೊಂದು ಸ್ಥಾಪಿಸಲ್ಪಟ್ಟಿತು.[18]

5) ಗಂಗಾವತಿಯ ಜಿನದೇವಾಲಯಗಳನ್ನು ಅಥವಾ ಎಲ್ಲಾ ಬಸದಿಗಳನ್ನು ಗಂಗರಾಜನು ಪುನಃಶ್ಚೇತನಗೊಳಿಸಿದನು.[19]

6) ದಂಡನಾಯಕ ಪುನಿಸಾಮಯ್ಯನು ಕರೆಕಾಂತಜಿಯನಿಗೆ ದೇವದಾನವಾಗಿ ಭೂಮಿಯನ್ನು ದಾನವಾಗಿ ನೀಡಿದನು.[20]

7) ಪುನಿಸರಾಜ ದಂಡಾಧಿಪ ತ್ರಿಕೂಟ ಬಸದಿಗಾಗಿ, ಭೂಮಿಯನ್ನು ದಾನವಾಗಿ ನೀಡಿದನು ಮತ್ತು ಎಣ್ಣೆ ಗಿರಣಿಯಿಂದ ಎಣ್ಣೆಯನ್ನು ನೀಡಿದನು.[21]

8) ಮತ್ತೊಬ್ಬ ಹಿರಿಯ ಸೇನಾಧಿಕಾರಿ ಪುನಿಸಾಮಯ್ಯನ ಪತ್ನಿಯಾದ ಜಕ್ಕಿಯಬ್ಬೆಯು ಕ್ರಿ.ಶ. 1117ರಲ್ಲಿ ಬಸ್ತಿ ಹೊಸಕೋಟೆಯಲ್ಲಿ ಒಂದು ಕಲ್ಲಿನ ಬಸದಿಯನ್ನು ಕಟ್ಟಿಸಿದಳು.[22]

9) ಮಹಾಮಂತ್ರಿಯಾದ ಮಾರಸಿಂಗ ಮತ್ತು ಸಾಧ್ವೀಮಣಿಯಾದ ಮಾಚಿಕಬ್ಬೆಯ ಪುತ್ರಿಯಾದ ರಾಣಿ ಶಾಂತಲಾದೇವಿಯು ಬುದ್ಧಿಮತ್ತೆಗೂ ಸೌಂದರ್ಯಕ್ಕೂ ಪ್ರಸಿದ್ಧಳಾಗಿದ್ದಳು. ಅವಳು ಲಲಿತ ಕಲೆಗಳಲ್ಲಿ ಪರಿಣಿತೆಯಾಗಿದ್ದಳು. ಅವಳು ಮಹಾನ್ ಹೊಯ್ಸಳರಸ ವಿಷ್ಣುವರ್ಧನ ನನ್ನು ವಿವಾಹವಾಗಿದ್ದಳು. ಅವಳು ತನ್ನ ಪತಿಗೆ ಯುದ್ಧಭೂಮಿಯಲ್ಲಿ ಸ್ಫೂರ್ತಿಯ ಸ್ರೋತವಾಗಿದ್ದಳು. ಆತನಿಗೆ ರಾಜ್ಯಾಡಳಿತದಲ್ಲಿ ಉತ್ತಮ ಸಲಹೆಗಾರಳಾಗಿದ್ದಳು ಮತ್ತು ಕೆಲವೊಮ್ಮೆ ಆಡಳಿತದ ಜವಾಬ್ದಾರಿಯನ್ನು ಸಹ ಹೊರುತ್ತಿದ್ದಳು.

ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ಅವಳು ಉನ್ನತ ಮಟ್ಟಕ್ಕೇರಿದಳು. ಅವಳು ಶೈವ, ಶ್ರೀ ವೈಷ್ಣವ ಮತ್ತು ಜೈನ ಎಲ್ಲಾ ಧರ್ಮಗಳಲ್ಲಿಯೂ ಸಮಾನ ಗೌರವವನ್ನಿಟ್ಟಿದ್ದಳು. ಕ್ರಿ.ಶ. 1117ರಲ್ಲಿ ಕಪ್ಪೆ ಚೆನ್ನಿಗರಾಯನ ದೇವಾಲಯವನ್ನು ಕಟ್ಟಿಸಿದಳು. ಆದರೆ ಆಕೆಗೆ ಜೈನ ಧರ್ಮದಲ್ಲಿ ವಿಶೇಷ ಪ್ರೀತ್ಯಾಧಾರಗಳಿದ್ದರು.[23]

ಆಕೆಯು ಶ್ರವಣಬೆಳಗೊಳದಲ್ಲಿ ಸುಂದರವಾದ ಸವತಿ ಗಂಧರ್ವಣ ಬಸದಿಯನ್ನು ಕಟ್ಟಿಸಿದಳು. ಅದಕ್ಕೆ ಅನೇಕ ರೀತಿಯ ಉಡುಗೊರೆಗಳನ್ನು ಕೊಟ್ಟಳು. ಅಂತಿಮವಾಗಿ, ಆಕೆಯು ಶಿವಗಂಗೆಯಲ್ಲಿ ಜೈನ ಧರ್ಮದ ಕಟ್ಟಳೆಯಂತೆ, ಸಲ್ಲೇಖನ ವ್ರತವನ್ನು ಕೈಗೊಂಡು ಆಧ್ಯಾತ್ಮಿಕವಾಗಿ, ಮೃತ್ಯುವಿಗೆ ಸ್ವಾಗತ ಕೋರಿದಳು.[24] ಹೀಗೆ

ಅತ್ತಿಮಬ್ಬೆ ಮತ್ತು ಶಾಂತಲಾದೇವಿ ಇಬ್ಬರು ಮಹಿಳೆಯರೂ, ಮಧ್ಯಕಾಲೀನ ಕರ್ನಾಟಕದಲ್ಲಿ ಮಹಾನ್ ಜೈನಭಕ್ತೆಯರಾಗಿದ್ದು, ತಮ್ಮ ಜೀವನದಲ್ಲಿ ಸಂಪೂರ್ಣ ಸಾರ್ಥಕತೆಯನ್ನು ಕಂಡುಕೊಂಡವ ರೆಂದು ಹೇಳಬಹುದು.

10) ಸೈನ್ಯಾಧಿಕಾರಿ ಗಂಗರಾಜ ಮತ್ತು ಅವನ ತಾಯಿ ಪೋಚಿಕಬ್ಬೆ ಅವನ ಪತ್ನಿ ಲಕ್ಷ್ಮೀ ಮತ್ತವನ ಹಿರಿಯ ಸಹೋದರನ ಹೆಂಡತಿ ಜಕ್ಕಮವ್ವೆ–ಈ ಮೂವರೂ ಮಹಿಳೆಯರೂ, ಜಿನನ ಪರಮ ಭಕ್ತೆಯರಾಗಿದ್ದರು. ಲಕ್ಷ್ಮಿಯು ಕ್ರಿ.ಶ. 1118ರಲ್ಲಿ ಹೊಸ ಜಿನ ದೇವಾಲಯವನ್ನು ಕಟ್ಟಿಸಿದಳು.[25]

11) ಕತ್ತರಿಘಟ್ಟದಲ್ಲಿ ನೊಲಂಬಶೆಟ್ಟಿಯ ಪತ್ನಿಯಾದ ದೇಮಿಕಬ್ಬೆಯಿಂದ ತ್ರಿಕೂಟ ಜಿನಾಲಯವು ಕಟ್ಟಲ್ಪಟ್ಟಿತು.[26]

12) ಗಂಗರಾಜನು ಪರವ ಮತ್ತು ಕುಕ್ಕುಟೇಶ್ವರ ದೇವರುಗಳ ಪೂಜೆಗಾಗಿ ಗೋವಿಂದವಡಿ ಗ್ರಾಮವನ್ನು ದಾನವಾಗಿ ನೀಡಿದನು.[27]

13) ಜಕ್ಕಿಯವ್ವೆ ದಂಡನಾಯಕಿ ದೊಡ್ಡ ಜೈನ ಭಕ್ತೆಯಾಗಿದ್ದಳು. ಕ್ರಿ.ಶ. 1120ರ ದಾಖಲೆಯಂತೆ ಗೋವಿಂದವಾಡಿ ಎಂಬಲ್ಲಿ ತೇವ ಮತ್ತು ಶುಷ್ಕ ಭೂಮಿಯನ್ನು ದಾನವಾಗಿ ಕೊಟ್ಟಿರುವುದಾಗಿ ತಿಳಿದು ಬಂದಿದೆ. ಅಲ್ಲದೆ ಬಸದಿಗಳಿಗೆ ಧನಸಹಾಯವನ್ನೂ ಮಾಡಿದಳು.[28]

14) ಮಹಾಪ್ರಧಾನ ದಂಡನಾಯಕ ಗಂಗಪಯ್ಯ, ತನ್ನ ತಮ್ಮ ಸೋಮಣ್ಣ ದಂಡನಾಯಕನ ನೆನಪಿಗಾಗಿ ಮಾದರಿವಾಗಿಲು ಬಸದಿಯನ್ನು ಕಟ್ಟಿಸಿ, ಅದಕ್ಕೆ ಧನಸಹಾಯ ನೀಡಿದನು.[29]

15) ಸುಭ ಚಂದ್ರದೇವನ ನಿಷಿಧಿಯು ಗಂಗರಾಜನಿಂದ ಸ್ಥಾಪಿಸಲ್ಪಟ್ಟಿತು.[30]

16) ರಾಣಿ ಶಾಂತಲಾದೇವಿಯು ಪ್ರಭಾಚಂದ್ರ ಸಿದ್ಧಾಂತ ದೇವನಿಗಾಗಿ, ಕಲ್ಕನಿನಾಡು ಎಂಬಲ್ಲಿ ಮೊಟ್ಟೆ ನವಿಲೆ ಎಂಬ ಹಳ್ಳಿಯನ್ನು ದಾನ ಮಾಡಿದಳು.[31]

17) ಕೋಟೆಯ ದಂಡನಾಯಕನ ಪತ್ನಿಯಾದ ಹೆಗ್ಗಡತಿ ಜಕ್ಕಿಯಬ್ಬೆಯು ಎರಡು ದೇವಾಲಯ ಗಳನ್ನು ಕಟ್ಟಿಸಿ, ಅವುಗಳಿಗೆ ಶಾಂತಲೇಶ್ವರ ಮತ್ತು ಬೊಪ್ಪೇಶ್ವರ ಎಂದು ಹೆಸರಿಸಿದಳು.[32]

18) ಪ್ರಭಾಚಂದ್ರ ಸಿದ್ಧಾಂತದೇವನ ಶಿಷ್ಯನಾದ ನಾಗಿಯೆಕ್ಕ ಒಂದು ನಿಧಿಯನ್ನು ಕಟ್ಟಿಸಿದನು.[33]

19) ಗಂಗರಾಜನ ಮಗನಾದ ಈಚಣನು ಜೈನ ದೇವಾಲಯ ತ್ರೈಲೋಕ್ಯರಂಜನವನ್ನು ಕಟ್ಟಿಸಿದುದಾಗಿ ತಿಳಿದುಬಂದಿದೆ. ಅದನ್ನು ಬೊಪ್ಪಣ ಚೈತ್ಯಾಲಯವೆಂದು ಕರೆಯುತ್ತಿದ್ದರು.[34]

20) ಗಂಗರಾಜನ ಪತ್ನಿಯಾದ ಲಕ್ಷ್ಮೀಮತಿಯು, ಸುಭಚಂದ್ರ ಸಿದ್ಧಾಂತದೇವನ ಶಿಷ್ಯನಾದ ಬುಚಣನ ನೆನಪಿಗಾಗಿ, ಒಂದು ಶಿಲಾಸ್ಥಂಭವನ್ನು ಸ್ಥಾಪಿಸಿದಳು.[35]

21) ಹೊಯ್ಸರಳಸ ಮೊದಲನೇ ನರಸಿಂಹನ, ಖಜಾಂಚಿಯೂ ಮತ್ತು ಮಂತ್ರಿಯೂ ಆದ ಹಲ್ಲಾ ಚಾತುರ್ವಿಮ್‌ಸತಿ ಜಿನಾಲಯವನ್ನು ಕಟ್ಟಿಸಿದನು.[36]

22) ಮಹಾಪ್ರಧಾನ, ಸರ್ವಾಧಿಕಾರಿ, ಹೆಗ್ಗಡೆ ಬಾಲ್ಲಯ್ಯನಿಂದ ಶ್ರೀಕರ್ಣ ಜಿನಾಲಯದ ದೇವ ಪರಸುದೇವನಿಗಾಗಿ, ಪೂಜಾ ಕಾಣಿಕೆಗಳಿಗಾಗಿ, ಬೋಗಾವದಿ ಗ್ರಾಮ ಮತ್ತು ಅದರ ಅದರ ಕೊಪ್ಪಲು ಕಲಾಬೋವನಹಳ್ಳಿಯ ಸುಂಕದ ಆದಾಯವನ್ನು ದಾನವಾಗಿ ಬಿಟ್ಟು ಕೊಡಲಾಯಿತು.[37]

23) ಮಹಾಪ್ರಧಾನ ಸೇನಾಧಿಪತಿ, ಸರ್ವಾಧಿಕಾರಿ ಕೇತೇಯ ದಂಡನಾಯಕರಿಂದ ಇದೇ ನಾಡಿನಲ್ಲಿ ಕೊಲುಂಗರಾದ ಬಸದಿಗೆ ತೆರಿಗೆಗಳಿಂದ ಬರುವ ಆದಾಯವನ್ನು ಬಿಟ್ಟು ಕೊಡಲಾಯಿತು.[38]

24) ನೇಮಿಚಂದ್ರಪಂಡಿತ ಮತ್ತು ಬೆಳುಗುಳದ ಮನಿಕ್ಯಾನಕರಸ್‌ರವರ ಶಿಷ್ಯನಾದ ಬಾಲಚಂದ್ರನಿಂದ ನಗರ ಜಿನಾಲಯದ ದೇವರಾದ ಆದಿನಾಥನಿಗೆ ಭೂಮಿಯನ್ನು ದಾನ ಮಾಡಲಾಯಿತು.[39]

**ಸೈನ್ಯಾಧಿಕಾರಿಗಳು**

ವಿಷ್ಣುವರ್ಧನನ ಪ್ರಸಿದ್ಧ ಸೇನಾಧಿಕಾರಿಗಳು ಗಂಗರಾಜ, ಮರಿಯಾನೆ, ಭರತ, ಮುನಿಸಾಮಯ್ಯ, ಬೊಪ್ಪ ಮತ್ತು ವಿಷ್ಣು ಎಲ್ಲರೂ ಜೈನಭಕ್ತರಾಗಿದ್ದರು. ಇವರೆಲ್ಲರೂ ಅವರ ರಾಣಿಯಂತೆಯೇ ತುಂಬುತ್ಸಾಹದಿಂದ ಬಸದಿಗಳನ್ನು ರಿಪೇರಿ ಮಾಡಿಸುವುದರ ಅಥವಾ ಕಟ್ಟಿಸುವುದರ ಮೂಲಕ ಜೈನ ಧರ್ಮವನ್ನು ಪ್ರಚಾರ ಮಾಡಿದರು. ಇವರುಗಳಲ್ಲಿ ಅತ್ಯಂತ ಪ್ರಸಿದ್ಧ ನಾಗಿದ್ದ ವ್ಯಕ್ತಿ ಎಂದರೆ ನಿಸ್ಸಂದೇಹವಾಗಿಯೂ ಗಂಗರಾಜ. ಈತ ಜೈನರಿಗೆ ನೀಡಿದ ಉಡುಗೊರೆಗಳು ಅನೇಕ ದಾಖಲೆಗಳಲ್ಲಿ ಪ್ರಶಂಸೆಗೆ ಪಾತ್ರವಾಗಿವೆ.

## 6.4 ವೈಷ್ಣವ ದೇವಾಲಯಗಳಿಗೆ ದಂಡನಾಯಕರ ಕೊಡುಗೆಗಳು

ಈ ಕೆಳಕಂಡ ಶಿಲಾಲೇಖನಗಳು ವೈಷ್ಣವ ಧರ್ಮದ ಬಗ್ಗೆ ದಾಖಲೆಗಳನ್ನು ಹೊಂದಿವೆ.

1) ಸಾಮಂತ ನಾಗಣ್ಣ ಒಬ್ಬ ವೈಷ್ಣವ.[40]

2) ಕೊನೆಯ ಸಂಕರ ದಂಡನಾಥ ಹೊನ್ನಾವರ ಅಗ್ರಹಾರದಲ್ಲಿ ಕೇಶವನ ದೇವಾಲಯ ಒಂದನ್ನು ಕಟ್ಟಿದನು.[41]

3) ಮಹಾಪ್ರಧಾನ ಲಕ್ಷ್ಮಯ್ಯ ಸೆಟ್ಟಿಯೂರಿನಲ್ಲಿ ನಾಗಕೇಶವ ದೇವರಿಗೆ ಭೂಮಿಯನ್ನು ದಾನವಾಗಿ ಕೊಟ್ಟನು.[42]

4) ಮಹಾಪ್ರಧಾನ ಮಾಚಮಯ್ಯ ಹೆಗ್ಗಡೆ ಕೇಸಿಯನ್ನ ಮತ್ತು ಹೆಗ್ಗಡೆ ಕೊಮ್ಮನನರೊಂದಿಗೆ ಭಗವಂತ ಕೃಷ್ಣನ ಸೇವೆಗಾಗಿ, ಭೋಗನಹಳ್ಳಿಯನ್ನು ಅದರ ಕೊಪ್ಪಲಿನೊಂದಿಗೆ ಮತ್ತು ಕೊಠಡಿ ಮತ್ತು ಮನೆಗಳ ಮೇಲಿನ ತೆರಿಗೆಗಳಿಂದ ಬರುವ ಆದಾಯವೆಲ್ಲವನ್ನು ದಾನ ಮಾಡಿದನು.[43]

5) ವೀರಯ್ಯ ದಂಡನಾಯಕನು ದೇವಾಲಯಗಳನ್ನು ಕಟ್ಟಿ ವೀರನಾರಾಯಣ, ಅಚ್ಯುತೇಶ್ವರ ದೇವರುಗಳನ್ನು ಪೂಜೆಗಾಗಿ ಪ್ರತಿಷ್ಠಾಪಿಸಿದನು ಮತ್ತು ಮರಸೆನಾಡಿನಲ್ಲಿ ಮುದುಗೆರೆ ಹಳ್ಳಿಯನ್ನು ಕೊಡುಗೆಯಾಗಿ ನೀಡಿದನು.[44]
6) ಸರ್ವಾಧಿಕಾರಿ ದವನ ದಂಡ ನರ್ಯಾಕ ಹೊಳಲ್ಕೆರೆ ನಾಡಪ್ರಭು ಮತ್ತು ಇತರ ಅನೇಕರು ನಾರಾಯಣ ದೇವರಿಗಾಗಿ ವಿದ್ಯಾಧನಸ್ವಾಮಿಗೆ ದಾನ ಮಾಡಿದರು.[45]
7) ಮಲೆಯ ದನ್ನಾಯಕ ಮೂವತ್ತು ಗೋಧನಗಳನ್ನು ವಾಸುದೇವನ ದೇವಾಲಯದಲ್ಲಿ ವಿಟ್ಟಂದಿಯ್ಯೆ ನಗರನಿಗೆ ದಾನ ಮಾಡಿದನು.[46]
8) ವಾಸುದೇವ ನಾಯಕನು ನಾರಾಯಣಪುರದ ಲಕ್ಷ್ಮೀನಾರಾಯಣನ ಪೂಜೆಗಾಗಿ ಐರವಲ್ಲಿಯನ್ನು ದಾನ ಮಾಡಿದನು.[47]

## 6.5 ದಂಡನಾಯಕರ ಸಾಮಾಜಿಕ ಮತ್ತು ವಿಚಾರಾತ್ಮಕ ಸಂಬಂಧ

ಹೊಯ್ಸಳ ಶಿಲಾಶಾಸನಗಳ ಅಧ್ಯಯನದಿಂದ ಆಗಿನ ಆಡಳಿತಾಧಿಕಾರಿಗಳ ಸಾಮಾಜಿಕ ಮತ್ತು ವಿಚಾರಾತ್ಮಕ ಸಂಬಂಧಗಳನ್ನು ಕುರಿತು, ನಾವು ಸ್ವಲ್ಪ ಮಾಹಿತಿಯನ್ನು ಸಂಗ್ರಹಿಸ ಬಹುದಾಗಿದೆ. ಒಂದು ಆಶ್ಚರ್ಯಕರ ವಿಷಯವೆಂದರೆ ಶಿಲಾಶಾಸನಗಳಲ್ಲಿ ತಿಳಿಸಿರುವಂತೆ, ಆಡಳಿತಾಧಿ ಕಾರಿಗಳಲ್ಲಿ ಹೆಚ್ಚು ಕಡಿಮೆ ಬ್ರಾಹ್ಮಣರೇ ಇಲ್ಲದಿರುವುದು.

ಆದರೂ, ಹೊಯ್ಸಳ ಆಡಳಿತಗಾರರಲ್ಲಿ ಬಹುಮುಖ್ಯವಾಗಿ ಎರಡು ಸಾಮಾಜಿಕ ಗುಂಪುಗಳಿರುವುದನ್ನು ಕಾಣುತ್ತೇವೆ.

(1) ಜೈನ (2) ಅಬ್ರಾಹ್ಮಣರು. ಜೈನರಿಗೆ ಹೋಲಿಸಿದರೆ ಅಬ್ರಾಹ್ಮಣರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಆಡಳಿತಾಧಿಕಾರಿಗಳ ಪ್ರಮುಖ ಕುಟುಂಬಗಳ ವಂಶಾವಳಿಯು, ಆಳುವ ಕುಟುಂಬಗಳ ಸಾಮಾಜಿಕ ಸಕ್ರಿಯ ಪಾತ್ರವನ್ನು ಮಾತ್ರವಲ್ಲ, ಅದರ ವಂಶಪಾರಂಪರ್ಯ ಲಕ್ಷಣಗಳನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಹೊಯ್ಸಳರಸರು ತಮ್ಮ ಆಡಳಿತ ವಿಭಾಗಕ್ಕೆ ನಿಮ್ನ ವರ್ಗದ ಸಾಮಾಜಿಕ ಗುಂಪುಗಳನ್ನು ಸೇರಿಸಿ ಕೊಳ್ಳುವಾಗ ಕುಲೀನತೆಯನ್ನಾಗಲೀ ಅಥವಾ ಮನೆತನದ ಹಿರಿಮೆಯನ್ನಾಗಲೀ, ಅಂತಸ್ತಿಗೆ ಒಂದು ಚಿಹ್ನೆಯಾಗಿ ಒತ್ತು ಕೊಡಲಿಲ್ಲವೆಂದು ತೋರುತ್ತದೆ.

ಹೊಯ್ಸಳರಸರು ವಾಸ್ತವವನ್ನು ಯೋಚಿಸಬಲ್ಲವರಾಗಿದ್ದರು ಮತ್ತು ಆಡಳಿತ ನಡೆಸಲು ವಿವಿಧ ಸಾಮಾಜಿಕ ಸ್ತರಗಳಿಂದ ವ್ಯಕ್ತಿಗಳನ್ನು ಆಯ್ಕೆ ಮಾಡುತ್ತಿದ್ದರು. ಉದಾಹರಣೆಗೆ ಗಂಗರಾಜ, ಮರಿಯಾನೆ, ಭರತ, ಪುನಿಸಾಮಯ್ಯ, ಬೊಪ್ಪ ಮತ್ತು ವಿಷ್ಣು ಜೈನರಾಗಿದ್ದರು. ಸ್ವಾಭಾವಿಕವಾಗಿಯೇ ಅವರ ಸಾಮಾಜಿಕ ದೃಷ್ಟಿಕೋನವು ಜೈನ ಸಿದ್ಧಾಂತದಿಂದ ಪ್ರಭಾವಿತವಾಗಿರುತ್ತಿತ್ತು. ಹಾಗೆಯೇ ಹಿಂದೂ ಸಮೂಹವು ಹಿಂದೂ

ಸಿದ್ಧಾಂತಗಳಿಂದ ಮುನ್ನಡೆಸಲ್ಪಡುತ್ತಿತ್ತು. ಬ್ರಾಹ್ಮಣರು ಹೊಯ್ಸಳ ಆಡಳಿತ ವಿಭಾಗಕ್ಕೆ ಪ್ರವೇಶಿಸಿದ್ದರು. ಆದರೆ ಹೆಚ್ಚು ಸಂಖ್ಯೆಯಲ್ಲಿಲ್ಲ. ಹೊಯ್ಸಳ ಶಿಲಾಶಾಸನಗಳು ಸೂಚಿಸಿರುವಂತೆ ಆಳುವ ಅಧಿಕಾರಿಗಳು 'ಧರ್ಮ' ದ ವಿಚಾರದಿಂದ ಹೆಚ್ಚು ಪ್ರಭಾವಿತರಾಗಿದ್ದರು. 'ಧರ್ಮ'ದ ಅರ್ಥವು ಎರಡು ರೀತಿಯಲ್ಲಿ ಅರ್ಥೈಸಲ್ಪಡುತ್ತಿತ್ತು. (1) ವರ್ಣಧರ್ಮ (2) ಆಶ್ರಮ ಧರ್ಮ. ವರ್ಣಧರ್ಮ ಸಮಾಜದಲ್ಲೆಡೆ ವ್ಯಾಪಿಸಿತ್ತು. ಆಶ್ರಮಧರ್ಮವು ಪೂರ್ಣತಃ ಆಚರಣೆ ಯಲ್ಲಿರಲಿಲ್ಲ. ಅದರಲ್ಲೂ ವಾನಪ್ರಸ್ಥಾಶ್ರಮ ಮತ್ತು ಸಂನ್ಯಾಸ. ಮನುಧರ್ಮ ಶಾಸ್ತ್ರವು ಸಾಮಾಜಿಕ ಸಂಸ್ಥೆಯ ಭದ್ರ ಬುನಾದಿಯಾಗಿತ್ತು. ಆಳುವ ಪ್ರಭುತ್ವವು ಈ ಕಾಲದಲ್ಲಿ ಪರಂಪರಾಗತ ಪದ್ಧತಿ ಮತ್ತು ಆಚರಣೆಗಳನ್ನು ಅದರಲ್ಲೂ ವರ್ಣಧರ್ಮವನ್ನು ಹಾಗೆಯೇ ಜಾರಿಗೆ ತಂದಿತ್ತು. ಆ ಅರ್ಥದಲ್ಲಿ ಆಳುವ ಅಧಿಕಾರಿಗಳು ಸಾಮಾಜಿಕ ಸುಧಾರಣೆಯನ್ನಾಗಲೀ, ಅಥವಾ ಶಾಸನಗಳ ನ್ನಾಗಲೀ ಜಾರಿಗೆ ತರಲಿಲ್ಲ. ಅವರು ಸುಮ್ಮನೆ ವರ್ಣಧರ್ಮದ ತತ್ವಗಳನ್ನು ಎತ್ತಿ ಹಿಡಿದರಷ್ಟೆ. ಇದು ಆ ಕಾಲದ ಆಡಳಿತ ಪ್ರಭುತ್ವದ ಸಾಮಾಜಿಕ ಮತ್ತು ವೈಚಾರಿಕ ರೀತಿಯಾಗಿತ್ತು. ಮುಖ್ಯವಾಗಿ, ಬ್ರಾಹ್ಮಣೇತರ ಜಾತಿಯು ಆಡಳಿತ ಅಧಿಕಾರಿಗಳ ಸ್ಥಾನಕ್ಕೆ ಹೊಯ್ಸಳರಸರಿಂದ ಮೇಲಕ್ಕೆತ್ತಲ್ಪಟ್ಟರು.

## ಅಡಿಟಿಪ್ಪಣಿಗಳು

1) E.C. VII, Ng, 169
2) Ibid. Ng. 64
3) Ibid. Ng. 130
4) Ibid. Ng. 72
5) Ibid. Ng. 80
6) Ibid. 81
7) Ibid. V, Cn. 260
8) Rice, Mysore Inscriptions. P.7
9) E.C. XDg. 36
10) Ibid. VI sgl
11) Ibid. VIII, Sa. 140
12) Ibid. X Dg. 133
13) Ibid. II SB 563
14) Ibic. V Cn. 189
15) Ibid. XII Tp. 107
16) Ibid. V My.130
17) Ibid. II 1155
18) Ibid. VIII Dopddagaddavalli 36
19) E.C. II, 156
20) Ibid.
21) Ibid. V. 118
22) Ibid. IV Chamarajanagar 21
23) MAR, 1920. p. 32
24) E.C. II 137
25) Ibid. II SB. 118
26) Ibid. IV 3
27) Ibid. II
28) Ibid. 158
29) Ibid. V Hn 57
30) Ibid. V My 207
31) Ibid. II 135

32) Ibid. 162
33) Ibid. VII 30
34) Ibid. VI 107
35) Ibid. VIII 66
36) Ibid. II 481. Sravanabelagola
37) Ibid.
38) Ibid. Bhogadi (Ng) 184
39) Ibid. VII 29 Kambadahalli
40) Ibid. VI 15 Kyathanahalli.
41) Ibid. V Introduction
42) Ibid. VI Malaguru 66
43) Ibid. IV 108 Cn
44) Ibid. VII Santigrama 167
45) Ibid. V III
46) Ibid V, Mn 89
47) E.C. VII Mudugere 142

## ಅಧ್ಯಾಯ 7

## ದಂಡನಾಯಕರು ಮತ್ತು ಲಲಿತಕಲೆಗಳು

## ದಂಡನಾಯಕರು ಪ್ರೋತ್ಸಾಹಿಸಿದ ದೇವಾಲಯಗಳ ನಿರ್ಮಾಣ ಕಾರ್ಯಗಳು

ವಿಷ್ಣುವರ್ಧನನ ಆಳ್ವಿಕೆಯಲ್ಲಿ ಹೊಯ್ಸಳ ಕಲೆ ಮತ್ತು ವಾಸ್ತುಶಿಲ್ಪವು ಉತ್ತುಂಗ ಶಿಖರಕ್ಕೇರಿತು. ಹೊಯ್ಸಳ ರಾಜ್ಯದ ವೃದ್ಧಿಸುತ್ತಿದ್ದ ಸಂಪತ್ಸಮೃದ್ಧಿ ಇದರ ಜೊತೆಗೆ ಕದಂಬರು ಮತ್ತು ಚಾಲುಕ್ಯರಂತಹ ಬಲಶಾಲಿ ರಾಜ್ಯಗಳೊಂದಿಗಿನ ಅದರ ಸಂಬಂಧ ಇವು ವಾಸ್ತುಶಿಲ್ಪದ ನವ್ಯ ಶೈಲಿಗೆ ಹುಟ್ಟು ಹಾಕಿದವು. ಹೊಯ್ಸಳ ವಾಸ್ತುಶಿಲ್ಪದ ವೈಶಿಷ್ಟ್ಯವೆಂದರೆ ಕಟ್ಟಡದ ಅಡಿಯಿಂದ ಮುಡಿಯವರೆಗೆ, ಆಳವಾದ ಮತ್ತು ಅನನ್ಯವಾದ ಕೆತ್ತನೆಯ ಕುಸುರಿ ಕೆಲಸ ಹೊಯ್ಸಳ ವಾಸ್ತುಶಿಲ್ಪದ ಅತ್ಯಂತ ಸುಂದರ ಅನುಪಮ ನಮೂನೆಗಳೆಂದರೆ ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳು.

ಹೊಯ್ಸಳ ವಾಸ್ತುಶಿಲ್ಪದ ಇತಿಹಾಸವು ವಿಷ್ಣುವರ್ಧನನ ಆಳ್ವಿಕೆಯಿಂದಲೇ ಪ್ರಾರಂಭ ವಾಯಿತೆಂದು ಹೇಳಬಹುದು. ಅವನ ಆಳ್ವಿಕೆಯು ನವ್ಯಶೈಲಿಯಲ್ಲಿ ಅನೇಕ ದೇವಾಲಯಗಳ ನಿರ್ಮಾಣದ ಕಾರಣದಿಂದ ಗಮನಾರ್ಹವಾದುದು. ಆದರೆ ಅತ್ಯಂತ ಪ್ರಸಿದ್ಧ ದೇವಾಲಯವೆಂದರೆ ರಾಜನ ಮತಪರಿವರ್ತನೆಯ ನೆನಪಿಗಾಗಿ ಕ್ರಿ.ಶ. 1117ರಲ್ಲಿ ಬೇಲೂರಿನಲ್ಲಿ ಕಟ್ಟಿಸಿದ ಕೇಶವ ದೇವಾಲಯ.

### 7.1 ಬೇಲೂರಿನ ಚನ್ನಕೇಶವ ದೇವಾಲಯ

ಅನುಪಮ ಸುಂದರವಾದ ಈ ದೇವಾಲಯವು ಕ್ರಿ.ಶ. 1117ರಲ್ಲಿ ಕಟ್ಟಲ್ಪಟ್ಟಿತು. ವೇಲಾಪುರ, ಅಭಿನವಕ್ರೋನಿ, ವೈಕುಂಠ, ತ್ರಿಲೋಕ ಮಹಾಸ್ಥಾನ ಮತ್ತು ದಕ್ಷಿಣ ವಾರಣಾಸಿ ಎಂದು ಕರೆಯಲ್ಪಡುತ್ತಿದ್ದ ಬೇಲೂರು, ಅನೇಕ ವರ್ಷಗಳ ಕಾಲ ಹೊಯ್ಸಳರ ರಾಜಧಾನಿಯಾಗಿತ್ತು. ಚನ್ನಕೇಶವನೆಂದು ಕರೆದರೂ, ಪ್ರಮುಖ ದೈವ ವಿಜಯನಾರಾಯಣ ಈ ದೇವಾಲಯವು ಮುಂದೆ ಆಳಿದ ಅನೇಕ ರಾಜರಿಂದ ರಕ್ಷಣೆ ಪಡೆದಿತ್ತು ಮತ್ತು ಪ್ರತಿ ಆಳ್ವಿಕೆಯಲ್ಲಿಯೂ ಶಿಲ್ಪಕಲೆಗೆ ಹೊಸ ವಿನ್ಯಾಸಗಳು ಸೇರ್ಪಡೆಯಾದುವು. ಮಂದಿರವು ವಿಶಾಲವಾದ ಪ್ರಾಂಗಣದ ಮಧ್ಯೆ, ಮಂಟಪಗಳಿಂದ ಮತ್ತು ದೇವಾಲಯಗಳಿಂದ ಸುತ್ತುವರೆಯಲ್ಪಟ್ಟು ಎತ್ತರವಾದ ವೇದಿಕೆಯ ಮೇಲೆ ನಿಂತಿದೆ ಮತ್ತು ಹೊರ ಪ್ರವೇಶ ದ್ವಾರದಲ್ಲಿ ದ್ರಾವಿಡ ಶೈಲಿಯ ಗೋಪುರದಿಂದ ಅಲಂಕೃತವಾಗಿದೆ. ಅದಕ್ಕೆ ಮೂರು ಪ್ರವೇಶ ದ್ವಾರಗಳಿವೆ. ಒಂದು, ಎರಡು ಕಡೆಗಳಲ್ಲಿಯೂ ಸ್ಥಂಭಗಳ ಹಜಾರವನ್ನು ಹೊಂದಿದೆ. ಹಜಾರದ ಸ್ಥಂಭಗಳ ಕಡೆಗೆ ಮತ್ತು ಛಾವಣಿಯ ಮೇಲ್ಭಾಗಕ್ಕೆ ಹೆಚ್ಚು ಗಮನವನ್ನು ಕೊಡಲಾಗಿದೆ. ಒಟ್ಟು 46 ಸ್ಥಂಭಗಳಿವೆ. ಅವುಗಳಲ್ಲಿ ಕೇಂದ್ರದಲ್ಲಿ ನಾಲ್ಕವ ಹೊರತು

ಎಲ್ಲವೂ ವಿವಿಧ ವಿನ್ಯಾಸಗಳನ್ನೊಳಗೊಂಡು ಅತ್ಯಾಶ್ಚರ್ಯಕರ ವೈವಿಧ್ಯತೆ ಮತ್ತು ಸೃಜನಶೀಲ ವಿನ್ಯಾಸದ ಸಂಕೀರ್ಣತೆಯನ್ನು ಮೆರೆದಿವೆ ಮತ್ತು ಅತ್ಯುತ್ತಮ ಕಲೆಯ ಕೆಲಸದ ಸಾಧನೆಗೆ ಮತ್ತು ಕ್ಷಮತೆಗೆ ಉತ್ತಮ ನಿರ್ದಶನಗಳಾಗಿವೆ. ಚನ್ನಕೇಶವ ಅಥವಾ ವಿಜಯ ನಾರಾಯಣನೆಂದು ಹೇಳಲ್ಪಡುವ ಮೂರ್ತಿಯು ಹೊಯ್ಸಳ ಶಿಲ್ಪಕಲೆಯ ಅತ್ಯುತ್ತಮ ಕೈಕೆಲಸವಾಗಿದೆ. ಅದು 9 ಅಡಿ ಎತ್ತರವಿದೆ ಮತ್ತು 3 1/2 ಅಡಿ ಎತ್ತರದ ಪೀಠದ ಮೇಲೆ ನಿಂತಿದೆ ಮತ್ತು ಅದರ ಮೇಲೆ ಮಕರ ಮತ್ತು ಲತೆಯ ತೋರಣಗಳಿವೆ. ಕೇಶವಮೂರ್ತಿಯು ಮಣಿಮುಕುಟ ಅಥವ ವಜ್ರಕಿರೀಟ, ಮಕರಕುಂಡಲ ಅಥವಾ ಕರ್ಣಕುಂಡಲಗಳು, ಭುಜದ ಆಭರಣಗಳು, ಹಾರ, ಸೊಂಟದ ಆಭರಣಗಳು ಮತ್ತು ಬೆರಳುಗಳಿಗೆ ಉಂಗುರಗಳನ್ನು ಧರಿಸಿದ್ದಾನೆ. ಮಕರ ಮತ್ತು ಲತೆಯ ತೋರಣದ ಮೇಲೆ ದಶಾವತಾರಗಳನ್ನು ಚಿತ್ರಿಸಲಾಗಿದೆ. ಪೀಠದ ಮೇಲೆ ಗರುಡನ ಚಿತ್ರವಿದೆ ಮತ್ತು ವಿಷ್ಣುವರ್ಧನನ ಹೆಸರನ್ನು ಕೆತ್ತಲಾಗಿದೆ.

ಮಂದಿರವು ಒಂದು 32 ಕೋನಗಳುಳ್ಳ ನಕ್ಷತ್ರಾಕಾರದ ವೇದಿಕೆಯ ಮೇಲೆ ನಿಂತಿದೆ ಮತ್ತು ಮಂದಿರದ ಎಲ್ಲಾ ಕಡೆಗಳಲ್ಲೂ ಕಾವ್ಯ ಮತ್ತು ಪುರಾಣಗಳಿಂದ ಆಯ್ದ ಚಿತ್ರಗಳ ಮತ್ತು ದೃಶ್ಯಗಳ ಸಾಲುಗಳಿವೆ. ಮಂದಿರದಲ್ಲಿ ಸುಮಾರು ಮೂರು ಸಾವಿರ ದೊಡ್ಡ ಮೂರ್ತಿಗಳಿವೆ ಮತ್ತು ಗೋಡೆಗಳ ಮೇಲೆ ಚಿತ್ರಿತವಾಗಿರುವ ಮೂರ್ತಿಗಳ ಸಂಖ್ಯೆ ಸುಮಾರು ಹತ್ತು ಸಾವಿರ 42 ಮದನಿಕೆಯರ ಮೂರ್ತಿಗಳು ಸೌಂದರ್ಯಕ್ಕೂ, ಅದ್ವಿತೀಯ ಕಲಾವಂತಿಕೆಗೂ ಬಹು ಪ್ರಸಿದ್ಧಿಯಾಗಿವೆ. ಇವುಗಳು "ಸಾಲಭಂಜಿಕ"ಗಳೆಂದು ಕರೆಯಲ್ಪಡುತ್ತವೆ. ಇವು ಭರತನಾಟ್ಯ ಮತ್ತು ಸಂಗೀತಗಳ ತಾತ್ವಿಕ ವಿಚಾರಗಳ ವಿವಿಧ ಭಾವಭಂಗಿಗಳನ್ನು ಪ್ರತಿನಿಧಿಸುತ್ತವೆ. ಇವು ಕಲೆಯ ಅದ್ಭುತ ಸೃಷ್ಟಿಯೆಂದು ಖ್ಯಾತಿವೆತ್ತಿವೆ. ಅವು ಪೂರ್ಣತಃ ಸೌಂದರ್ಯ ಮತ್ತು ಭಾವನೆಯ ಪ್ರತೀಕಗಳಾಗಿವೆ. ಸ್ಥಳ ಪುರಾಣದಂತೆ ಇವುಗಳನ್ನು ಹೆಚ್ಚಿನವು ಮೋಹಿನಿಯ ನಾಟ್ಯದ ವಿವಿಧ ಭಾವಗಳನ್ನು ಪ್ರದರ್ಶಿಸುತ್ತವೆ. ಇಲ್ಲಿ ನಗಾರಿ ಬಾರಿಸುವವರ ಮೇಳಗಳ ಚಿತ್ರಗಳು ಪಂಖನೃತ್ಯ, ತರುಣಿ ಯೋರ್ವಳು ದಾವಣಿಯನ್ನು ಆಡಿಸುತ್ತಾ, ನರ್ತಿಸುತ್ತಿರುವ ದೃಶ್ಯ, ದುರ್ಗಾ ನೃತ್ಯ, ಕೊಳಲು ನೃತ್ಯ ಮತ್ತು ಡಮರುಗ ನೃತ್ಯಗಳನ್ನು ಪ್ರತಿಬಿಂಬಿಸುವ ಚಿತ್ರಗಳಿವೆ. ಸಂಗೀತ ವಾದ್ಯಗಳನ್ನು ನುಡಿಸುತ್ತಾ ಇರುವಂತೆ ಕೆತ್ತಲ್ಪಟ್ಟಿರುವ ಈ ಚಿತ್ರಗಳು ಅತ್ಯಂತ ಸುಂದರವಾಗಿ ದೃಶ್ಯ ಮೂಡಿಸಿವೆ. ಮಂದಿರದ ಪೂರ್ವಭಾಗದ ಪ್ರವೇಶ ದ್ವಾರದ ದಕ್ಷಿಣದಿಂದ ಪ್ರಾರಂಭಿಸುವಾಗ ನರ್ತಿಸುತ್ತಾ, ಕೊಳಲನ್ನೂ ದುತ್ತಿರುವ ಬಾಲಕನ ಮೂರ್ತಿ ಇದೆ. ಅದರ ಪಕ್ಕದಲ್ಲಿಯೇ ಅದೇ ತಾನೇ ಹಾಡನ್ನು ಹಾಡಲು ಪ್ರಾರಂಭಿಸಿರುವ ಸಂಗೀತ ವಿದುಷಿಯೊಬ್ಬಳ ಮೂರ್ತಿ ಇದೆ. ಮತ್ತೊಂದು ಚಿತ್ರವು ಸ್ತ್ರೀಯೋರ್ವಳು ತನ್ನ ಎಡಗೈಯಲ್ಲಿ ರುದ್ರವೀಣೆಯನ್ನು ಹಿಡಿದುಕೊಂಡಿರುವಂತೆ ಪ್ರತಿನಿಧಿಸುತ್ತದೆ. ಇವು ಮತ್ತಿತರ ಕೆತ್ತನೆಯ ಚಿತ್ರಗಳು ಅತ್ಯುನ್ನತ ಕಲಾಸಿರಿಯ ಬಹು ಅಪರೂಪದ ಮಟ್ಟವನ್ನು ಪ್ರದರ್ಶಿಸಿವೆ.

## 7.2 ಹಳೇಬೀಡುವಿನಲ್ಲಿರುವ ಹೊಯ್ಸಳೇಶ್ವರ ದೇವಾಲಯ

ಹೊಯ್ಸಳ ವಾಸ್ತುಶಿಲ್ಪದ ಉನ್ನತ ಸಾಧನೆಯೆಂದೇ ಹೆಸರು ಪಡೆದಿದೆ. ಬೇಲೂರು ತಾಲ್ಲೂಕಿನಲ್ಲಿ ಹಳೇಬೀಡು ಈಗೊಂದು ಹಳ್ಳಿ. ಹನ್ನೆರಡನೆಯ ಶತಮಾನದಲ್ಲಿ ಅದು ಹೊಯ್ಸಳರ ರಾಜಧಾನಿಯಾಗಿತ್ತು ಮತ್ತು ಇದನ್ನು ದ್ವಾರಸಮುದ್ರ ಅಥವಾ ದ್ವಾರಾಮತಿ ಎಂದು ಕರೆಯ ಲಾಗುತ್ತಿತ್ತು. ಕ್ರಿ.ಶ. 1326ರಲ್ಲಿ ಇದು ಮುಸ್ಲಿಂ ದಾಳಿಕೋರರಿಂದ ನಾಶಗೊಳಿಸಲ್ಪಟ್ಟಿತು. ಹೊಯ್ಸಳೇಶ್ವರ ದೇವಾಲಯವನ್ನು ವಿಷ್ಣುವರ್ಧನ ಹೊಯ್ಸಳೇಶ್ವರ ದೇವಾಲಯವೆಂದು ಕರೆಯುವರು. ಇದರ ನಿರ್ಮಾಣವು ಸುಮಾರು ಕ್ರಿ.ಶ. 1121ರ ಮೊದಲೇ ಪ್ರಾರಂಭವಾಗಿರಬೇಕು. ಇದು ವಿಷ್ಣುವರ್ಧನನ ಸೇನಾಧಿಪತಿ ಕೇತಮಲ್ಲನಿಂದ ಕಟ್ಟಲ್ಪಟ್ಟಿತು. ಇಲ್ಲಿ ಎರಡು ದೇವಾಲಯಗಳಿವೆ. ಎರಡು ಕಟ್ಟಡಗಳು ಪೂರ್ಣತಃ ಒಂದೇ ತೆರನಾಗಿವೆ ಮತ್ತು ಒಂದರ ಪಕ್ಕದಲ್ಲಿ ಒಂದು ಕಟ್ಟಲ್ಪಟ್ಟಿವೆ ಮತ್ತು ಪಕ್ಕದ ತೆರವಿನಿಂದ ಜೋಡಣೆಯಾಗಿವೆ. ಅವು ದೊಡ್ಡ ವೇದಿಕೆಯ ಮೇಲೆ ಕಟ್ಟಲ್ಪಟ್ಟಿವೆ ಮತ್ತು ಎರಡು ಮುಖ್ಯ ದೇಗುಲಗಳಲ್ಲಿ ಹೊಯ್ಸಳೇಶ್ವರ ಮತ್ತು ಶಾಂತಲೇಶ್ವರ ಲಿಂಗಗಳಿವೆ. ಪ್ರತಿ ಮುಖ್ಯ ಗುಡಿಯೂ, ಸುಖನಾಸಿ ಮತ್ತು ನವರಂಗವನ್ನು ಹೊಂದಿವೆ ಮತ್ತು ಪ್ರತಿ ಗುಡಿಯ ಮುಂದೆಯೂ ನಂದಿಯ ಅಂಗಳವಿದೆ. ನಂದಿಯ ಆವರಣದ ಸ್ಥಂಭಗಳು ಯಂತ್ರದ ತಿರುಗಣಿಗೆ ಸಿಕ್ಕಿದ್ದಿರಬಹುದೇ ಎನ್ನುವಂತೆ ಕಾಣುತ್ತವೆ. ಅವು ಎಷ್ಟು ಹೊಳಪಾಗಿವೆಯೆಂದರೆ ಅವುಗಳಲ್ಲಿ ಎರಡು ಪ್ರತಿ ಛಾಯೆಗಳು ಕಂಡುಬರುತ್ತವೆ. ನಂದಿಗಳಂತೂ ಬಹಳ ನೈಜವಾಗಿದ್ದು ಕಲೆಯ ಅತ್ಯುತ್ತಮ ಕೆಲಸವಾಗಿದೆ. ಮಂದಿರದ ಹೊರಗೆ ಆನೆಗಳ ಸಾಲಿದ್ದು, ಇವು 2000ಕ್ಕಿಂತ ಕಡಿಮೆ ಇರಲಾರವು. ಬಹುತೇಕ ಇವು ಅಲಂಕೃತವಾಗಿದ್ದು ಸವಾರರೊಂದಿಗಿವೆ. ಇವುಗಳ ಮೇಲೆ ಸಿಂಹಗಳ ಸಾಲುಗಳಿವೆ. ನಂತರ ಕಾಣುವುದು ಶಿಲೆಯಲ್ಲಿ ಅನನ್ಯ ಸೌಂದರ್ಯ ಮತ್ತು ದೃಶ್ಯ ವೈವಿಧ್ಯತೆ. ಇದರ ಮೇಲೆ ಕುದುರೆ ಸವಾರರ ಸಾಲು ಮತ್ತು ಮತ್ತೊಂದು ದೃಶ್ಯ ಸುರುಳಿ ರಾಮಾಯಣದಿಂದ ಆಯ್ದ ದೃಶ್ಯಾವಳಿ ನಂತರ ದೇವಲೋಕದ ಅಥವಾ ಸಾಂಪ್ರದಾಯಿಕ ಮೃಗಗಳ ಮತ್ತು ಪಕ್ಷಿಗಳು ಪೂರ್ವದ ಮುಂಬಾಗಿಲಿನುದ್ದಕ್ಕೂ ಎರಡು ಚಿತ್ರಗಳುಳ್ಳ ಶಿಲ್ಪಗಳ ಸಾಲು ಇವುಗಳ ಮೇಲೆ ಮೊನಚಾದ ಹಾಸುಗಲ್ಲುಗಳ ಕಿಟಕಿಗಳು ಮಧ್ಯೆ ಮೊದಲು ಒಂದು ಸಾಲು, ನಂತರ ದೇವರುಗಳ ಮೂರ್ತಿಗಳು, ದೇವಲೋಕದ ಅಪ್ಸರೆಯರು ಮತ್ತು ಹಿಂದೂ ಪುರಾಣದ ಮತ್ತಿತರ ಶಿಲ್ಪಗಳು, ಶಿವ ಮತ್ತು ಪಾರ್ವತಿ, ವಿಷ್ಣು ಮತ್ತು ಬ್ರಹ್ಮ ಅನೇಕ ಬಾರಿ ಕಾಣಿಸುತ್ತಾರೆ. ಇವುಗಳಲ್ಲಿ ಕೆಲವು ಅತ್ಯಂತ ಸೂಕ್ಷ್ಮ ವಿವಿರ ವಿಸ್ತಾರದೊಂದಿಗೆ ಕೆತ್ತಲ್ಪಟ್ಟಿವೆ. ಇವುಗಳಲ್ಲಿ ಕೆಲವನ್ನು ಇದುವರೆಗೆ ಕಂಡುಬಂದಿರುವ ಮಾನವ ಶ್ರಮದ ಅತ್ಯದ್ಭುತ ಪ್ರದರ್ಶನಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ನಾಲ್ಕು ಬಾಗಿಲುಗಳೂ ಮೇಲ್ಭಾಗದಲ್ಲಿ ಸುಂದರವಾಗಿ ಕೆತ್ತಲ್ಪಟ್ಟಿರುವ ಶಿಲ್ಪಗಳೂ, ಮಧ್ಯೆ ತಾಂಡವೇಶ್ವರ, ಅಕ್ಕಪಕ್ಕಗಳಲ್ಲಿ ಮಕರಗಳೂ, ಅವುಗಳ ಮೇಲೆ ವರುಣನೂ ಅವನ ಪತ್ನಿಯೂ ಆಸೀನರಾಗಿದ್ದಾರೆ. ಅನೇಕ ಸ್ತ್ರೀ ಮೂರ್ತಿಗಳು, ಅದರಲ್ಲೂ ನರ್ತಿಸುವ ತರುಣಿಯರು ಮೊಣಕಾಲುಗಳವರೆಗೆ ಉಡುಪು ಧರಿಸಿ,

ನರ್ತಿಸುತ್ತಿರುವಂತೆ ಕೆತ್ತಲ್ಪಟ್ಟಿವೆ. ಅನೇಕ ಕುದುರೆಗಳು ಆಭರಣಗಳಿಂದ ಅಲಂಕೃತವಾಗಿವೆ ಮತ್ತು ಕುದುರೆ ಸವಾರರು ಉದ್ದನೆಯ ಬೂಟುಗಳನ್ನು ಧರಿಸಿದ್ದಾರೆ. ಮದನಿಕೆಯ ಮೂರ್ತಿಗಳು ಕೆಲವೇ ಕೆಲವು ಇವೆ. ಅವುಗಳಲ್ಲಿ ಹನ್ನೊಂದು ಮಾತ್ರ ಇವೆ. ನರ್ತಕಿಯರ ಮತ್ತು ಸಂಗೀತಗಾರರ ಮೂರ್ತಿಗಳು ಅತ್ಯಂತ ನೈಜವಾಗಿ ಕೆತ್ತಲ್ಪಟ್ಟಿವೆ. ಎಡಗಡೆಯಿಂದ ಮೊದಲ ಮೂರ್ತಿಯು ಒಂದು ಬಗೆಯ ತಂತಿ ವಾದ್ಯವನ್ನು ನುಡಿಸುತ್ತಿರುವಂತೆ ಕೆತ್ತಲಾಗಿದೆ. ಎರಡನೆಯ ಮತ್ತು ಐದನೆಯ ಮೂರ್ತಿಗಳು ಒಂದು ವಿಧವಾದ ನಗಾರಿಯನ್ನು ಹೊಂದಿದ್ದಾರೆ. ಬಹುಶಃ ಮದ್ದಳೆ ಇರಬೇಕು ಅದನ್ನು ತಮ್ಮ ಸೊಂಟಕ್ಕೆ ಕಟ್ಟಿಕೊಂಡಿದ್ದಾರೆ. ನಾಲ್ಕನೆಯದು ದವಣಿಯನ್ನು ನುಡಿಸುತ್ತಿವೆ. ಅದೊಂದು ಬಗೆಯ ಡೋಲು, ಕೊನೆಯ ಮೂರ್ತಿಯು ಝಲ್ಲರಿಯನ್ನು ಹಿಡಿದಿದೆ. ನರ್ತಿಸುವ ಮೂರ್ತಿಗಳು ಮೊಣಕಾಲ್ಗಳ ಕೆಳಗೆ ನಾಲ್ಕು ಸಾಲುಗಳ ಗೆಜ್ಜೆಗಳನ್ನು ಧರಿಸಿವೆ. ಈ ಎಲ್ಲಾ ಮೂರ್ತಿಗಳ ತಲೆಯ ಹಿಂಭಾಗದಲ್ಲಿ ದೊಡ್ಡ ಗಂಟಿನಲ್ಲಿ ಕಟ್ಟಲಾಗಿದೆ. ಈ ಮೇಳವು ಯಕ್ಷಗಾನನ ಒಂದು ದೃಶ್ಯವನ್ನು ಪ್ರತಿನಿಧಿಸುತ್ತದೆ. ಒಟ್ಟಿನಲ್ಲಿ ಈ ದೇವಾಲಯವು ಅತ್ಯಂತ ಹೆಚ್ಚಿನ ಮೆಚ್ಚಿಗೆ ಮತ್ತು ಹೊಗಳಿಕೆಗೆ ಪಾತ್ರವಾಗಿದೆ. ಪರ್ಸಿ ಬ್ರೌನ್‌ರವರು ಅಭಿಪ್ರಾಯ ಪಡುವಂತೆ, ಈ ದೇಗುಲವು ಭಾರತೀಯ ವಾಸ್ತುಶಿಲ್ಪವು ತನ್ನ ಕಲಾ ಅಭಿವ್ಯಕ್ತಿಯಲ್ಲಿ ಪರಾಕಾಷ್ಠೆಯನ್ನು ಮುಟ್ಟಿರುವುದರ ಸಂಕೇತವಾಗಿದೆ.

### 7.3. ತಲಕಾಡಿನಲ್ಲಿರುವ ಕೀರ್ತಿ ನಾರಾಯಣ ದೇವಾಲಯ

ಮೈಸೂರಿನ ಬಳಿ ತಲಕಾಡಿನಲ್ಲಿರುವ ಈ ದೇವಾಲಯವು ಕ್ರಿ.ಶ. 1117ರಲ್ಲಿ ಹೊಯ್ಸಳ ವಿಷ್ಣುವರ್ಧನನಿಂದ ಕಟ್ಟಲ್ಪಟ್ಟಿತು. ಇದು ಗ್ರಾನೈಟ್ ಮತ್ತು ಇಟ್ಟಿಗೆಗಳಿಂದ ಕಟ್ಟಲಾಗಿದೆ ಮತ್ತು ಬಳಪದ ಕಲ್ಲನ್ನು ನವರಂಗ ನಾಲ್ಕು ಸುತ್ತು ಸ್ಥಂಭಗಳಿಗಾಗಿ ಮತ್ತು ಮೂರ್ತಿಗಾಗಿ ಮಾತ್ರ ಬಳಸಲಾಗಿದೆ. ಛಾವಣಿಯ ಕೆಳಗಿನ ಗೋಡೆಯನ್ನಲಂಕರಿಸಿರುವ ವೇದಿಕೆಯು ಬೇಲೂರಿನಂತೆಯೇ ಚಿತ್ರರೇಖೆ ಮತ್ತು ಅಲ್ಲಿನ ಶಿಲ್ಪಕಲೆಯ ಛಾಯೆಯೇ ಇಲ್ಲಿಯೂ ಕಂಡು ಬರುತ್ತದೆ. ಸಾಧಾರಣ ವಿಸ್ತೀರ್ಣವುಳ್ಳ ಹಜಾರವನ್ನು ಹೊಂದಿರುವ ನವರಂಗವು ಅದರ ಈಶಾನ್ಯ ಮತ್ತು ಆಗ್ನೇಯ ಭಾಗಗಳಲ್ಲಿ ಕಲ್ಲುಬೆಂಚುಗಳಿವೆ. ಇವು ಕ್ರಮವಾಗಿ ಉತ್ತರ ಮತ್ತು ದಕ್ಷಿಣದ ಪ್ರವೇಶದ್ವಾರಗಳವರೆಗೆ ವಿಸ್ತರಿಸಿವೆ. ನಾಲ್ಕು ಸ್ಥಂಭಗಳು ಹೊಯ್ಸಳರದೇ ಆದ ಪ್ರಾಚೀನ ಶೈಲಿಯ, ಯಂತ್ರದ ತಿರುಗಣೆಗೆ ಸಿಕ್ಕ ವಸ್ತುಗಳಂತಿವೆ. ಇತರ ಸ್ಥಂಭಗಳು, ಅಷ್ಟಮುಖೀ ನಕ್ಷತ್ರ, ಹದಿನಾರು ಭೇದಗಳುಳ್ಳ ಕಾಳಿ ಕೊಳವೆಯ ಹಾಗೆ, ಕೆಲವು ಅಷ್ಟ ಕೋನಾಕೃತಿ ಮತ್ತು ಒಂದೇ ರೀತಿಯ ಚದುರ ಹೀಗೆ ಅನೇಕ ಆಕಾರಗಳನ್ನು ಹೊಂದಿವೆ. ಈ ಮಂದಿರದ ಒಂದು ವಿಶಿಷ್ಟ ಲಕ್ಷಣವೆಂದರೆ ಮಂದಿರದ ಮೆಲ್ಹಾಸಿನ ಮೇಲೆ ಅಲಂಕೃತವಾಗಿರುವ ಚಿತ್ರಾಲಂಕಾರವಾಗಲೀ ಅಥವಾ ಪ್ರಾಣಿಗಳ ಸಾಲಾಗಲೀ ಅಥವಾ ಮಣಿಗಳ ಕೆಲಸವಾಗಲೀ, ದ್ವಾರಗಳ ಹಾದಿಯ ಅಂಕಣಗಳ ಪಕ್ಕಗಳಲ್ಲಿ ಹೆಚ್ಚುವರಿ ಸ್ಥಂಭಗಳನ್ನು ನಿಲ್ಲಿಸಲಾಗಿದೆ. ಇದರಿಂದ ಮಂದಿರದ ಹಜಾರವು ಸಾಮಾನ್ಯವಾಗಿ

ಇರಬೇಕಾದುದಕ್ಕಿಂತ ಹತ್ತು ಹೆಚ್ಚಿನ ಸ್ಥಂಭಗಳನ್ನು ಹೊಂದಿದೆ. ಮಂದಿರದ ಮುಖ್ಯ ಮೂರ್ತಿಯಾದ ಕೀರ್ತಿ ನಾರಾಯಣ ಮೂರ್ತಿಯು ಸುಮಾರು ಹತ್ತು ಅಡಿಗಳಷ್ಟು ಎತ್ತರವಿದ್ದು ತನ್ನ ನಾಲ್ಕೂ ಕೈಗಳಲ್ಲಿ ಶಂಖ, ಪದ್ಮ, ಗಧೆ ಮತ್ತು ಚಕ್ರಗಳನ್ನು ಹಿಡಿದು ಸಭಾಂಗಣದಲ್ಲಿ ನಿಂತಿದೆ. ವಿಷ್ಣುವಿನ ಹತ್ತು ಅವತಾರಗಳು ಪ್ರಭಾವಳಿಯಲ್ಲಿ ಕಾಣಿಸುತ್ತವೆ. ಮೂರ್ತಿಯು ಶಾಸ್ತ್ರೀಯವಾಗಿದ್ದರೂ, ಬೇಲೂರಿನ ಮೂರ್ತಿಯಷ್ಟು ಸುಂದರವಾಗಿಲ್ಲ. ಆದರೂ ಸಾಕಷ್ಟು ಪ್ರಭಾವಶಾಲಿಯಾಗಿದೆ.

ಹೊಯ್ಸಳ ಶಿಲ್ಪಿಗಳು ಸೃಜನಶೀಲ ಪ್ರತಿಭೆಗೆ ಅರ್ಹರಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟರು ಮತ್ತು ಕಟ್ಟಡಗಳ ಯಾವುದೇ ಭಾಗವನ್ನು ಮುಟ್ಟದೆ ಬಿಟ್ಟಿಲ್ಲ. ಆದುದರಿಂದ ಓರ್ವ ಆಂಗ್ಲ ಕವಿಯು ಈ ಕೆಳಕಂಡಂತೆ ಹೊಗಳಿದ್ದಾರೆ.

"ಪೂರ್ವದ ಕಲೆಯ ಆ ಹಳೆಯ ದಿನಗಳಲಿ
ಕಟ್ಟುವವರು ಮಾಡಿದರು ಬಹಳ ಎಚ್ಚರದಲಿ,
ಪ್ರತಿ ಅಂಗುಲವೂ ಮತ್ತು ನೋಡದ ಭಾಗವನು
ಏಕೆಂದರೆ ದೇವನು ನೋಡುವನು ಎಲ್ಲೆಲ್ಲೂ..."

## 7.4 ಬಸದಿಗಳು

ಅನೇಕ ಶಿವ, ವಿಷ್ಣು ಮತ್ತಿತರ ಮಂದಿರಗಳ ಜೊತೆಗೆ ಅನೇಕ ಜೈನ ಮಂದಿರಗಳನ್ನೂ ಇದೇ ಕಾಲದಲ್ಲಿ ಕಟ್ಟಲಾಯಿತು. ಗಂಗರಾಜನ ಕುಟುಂಬದ ಸದಸ್ಯರು ಕ್ರಿ.ಶ. 1115 ಮತ್ತು 1120ರ ನಡುವೆ ಅವುಗಳಲ್ಲಿ ಅನೇಕವನ್ನು ಕಟ್ಟಿದರು. ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನ ಸುತ್ತ ಇರುವ ಪ್ರಾಂಗಣ, ತೆರೀನಾ ಬಸದಿ, ಕಟ್ಟಳೆ ಬಸದಿ, ಜಕ್ಕವ್ವೆ ಬಸದಿ, ಸವತಿ ಗಂಧವಾರಣ ಬಸದಿ, ಪಾರ್ಶ್ವನಾಥ ಬಸದಿ, ಆರೇಗಲ್ ಬಸದಿ, ಬೊಪ್ಪಣ್ಣ ಚೈತ್ಯಾಲಯ, ಕಟುರ್ವಿಮ್ಸತಿ ತೀರ್ಥಂಕರ ಬಸದಿ, ಶಾಂತಿನಾಥ ಬಸದಿ ಈ ಕಾಲವು ಕೆಲವು ಜೈನ ರಚನೆಗಳಾಗಿವೆ.

ವಿಷ್ಣುವರ್ಧನನ ಪ್ರಸಿದ್ಧ ಸೇನಾನಿಯಾದ ಗಂಗರಾಜನು ಗೊಮ್ಮಟೇಶ್ವರನ ಸುತ್ತ ಮಂಟಪವನ್ನು ಕಟ್ಟಿಸಿದನು. ಇಲ್ಲಿ 43 ಮೂರ್ತಿಗಳಿವೆ. ಎರಡು ಕುಹ್ಮಂದಿನಿಗಳು ಮತ್ತು ಒಂದು ಬಾಹುಬಲಿಯ ಮೂರ್ತಿಯ ಹೊರತು ಉಳಿದವೆಲ್ಲಾ ತೀರ್ಥಂಕರರ ಮೂರ್ತಿಗಳಾಗಿವೆ.

ತೇರಿನಾ ಬಸದಿಯು ಒಂದು ಗರ್ಭಗೃಹ, ಸುಖನಾಸಿ ಮತ್ತು ನವರಂಗಗಳನ್ನು ಹೊಂದಿದೆ. ಬಾಹುಬಲಿಯ ಮೂರ್ತಿಯು ಸುಮಾರು 5 ಅಡಿ ಎತ್ತರವಿದ್ದು ಅದರ ಮುಂದೆ ತೇರುವಿನ ಮಂದಾರವಿದೆ ಮತ್ತು ಸುತ್ತಲೂ 52 ತೀರ್ಥಂಕರರ ಮೂರ್ತಿಗಳನ್ನು ಕೆತ್ತಲಾಗಿದೆ.

ಸಸಾನಾ ಬಸದಿಯು ಮುಖ್ಯ ದೇವರನ್ನು ಹೊಂದಿದ್ದು ಸುಖನಾಸಿ ಮತ್ತು ನವರಂಗ ಆದಿನಾಥನ 5 ಅಡಿ ಎತ್ತರದ ಮೂರ್ತಿಯನ್ನು ಹೊಂದಿದೆ. ಯಕ್ಷ ಮತ್ತು ಯಕ್ಷಿಣಿಯರ ಮೂರ್ತಿಗಳು, ಗೋಮುಖ ಮತ್ತು ಚಕ್ರೇಶ್ವರಿ, ಇವು ಸುಖನಾಸಿಯಲ್ಲಿ ಕಂಡುಬರುತ್ತವೆ. ಕೆಲವು ಜಿನ ಮೂರ್ತಿಗಳೊಂದಿಗೆ ಹೊರಗೋಡೆಗಳು ಮೂಡನ್ನೂ ಮತ್ತು ಶಿಖರಗಳನ್ನೂ ಹೊಂದಿವೆ. ಗಂಗರಾಜನು ಈ ಬಸದಿಗೆ 'ಇಂದಿರಾಕುಲಗೃಹ' ಎಂದು ಹೆಸರಿಟ್ಟನು.

ಎರಡು ಕಟ್ಟ ಬಸದಿಯು ಗಂಗರಾಜನ ಪತ್ನಿಯಾದ ಲಕ್ಷ್ಮಿಯಿಂದ ಸುಮಾರು ಕ್ರಿ.ಶ. 1118ರಲ್ಲಿ ಕಟ್ಟಲ್ಪಟ್ಟಿತು. ಅದು ಪೂರ್ವ ಮತ್ತು ಪಶ್ಚಿಮ ಎರಡೂ ಕಡೆಗಳಲ್ಲಿಯೂ ಮೆಟ್ಟಿಲನ್ನು ಹೊಂದಿರುವುದರಿಂದ ಅದಕ್ಕೆ ಈ ಹೆಸರು ಬಂದಿತು. ಆದಿನಾಥನ ಮೂರ್ತಿಯು ಎತ್ತರದಲ್ಲಿ 5 ಅಡಿ ಇದ್ದು ಅದರ ಎರಡೂ ಕಡೆಗಳಲ್ಲಿ ಪುರುಷರು ಚಾಮರ ಹಿಡಿದುಕೊಂಡಿರುವವರಿದ್ದಾರೆ. ಸುಖನಾಸಿಯು ಯಕ್ಷ ಮತ್ತು ಯಕ್ಷಿಣಿಯರನ್ನು ಹೊಂದಿದೆ.

ಕಟ್ಟಳೆ ಬಸದಿಯು ಶ್ರವಣಬೆಳಗೊಳದಲ್ಲಿ ಸಣ್ಣ ಗುಡ್ಡ ಮೇಲಿದೆ. ಅದು ಒಂದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಮತ್ತು ಪ್ರಾಂಗಣವನ್ನು ಹೊಂದಿದೆ. ಪ್ರಾಂಗಣದಲ್ಲಿ ಪದ್ಮಾವತಿಯ ವಿಗ್ರಹವು ಇರುವುದರಿಂದ ಇದನ್ನು ಪದ್ಮಾವತಿ ಬಸದಿ ಎಂದೂ ಕರೆಯುವರು. ಗರ್ಭಗೃಹದಲ್ಲಿ 6 ಅಡಿ ಎತ್ತರದ ಆದಿನಾಥನ ಪ್ರತಿಮೆ ಇದೆ. ಇದನ್ನು ಗಂಗರಾಜನು ತನ್ನ ತಾಯಿಯ ಹೆಸರಿನಲ್ಲಿ ಕಟ್ಟಿಸಿದನು.

ಅರೆಗಲ್ ಬಸದಿಯು ಶ್ರವಣಬೆಳಗೊಳದ ಬಳಿ ಇರುವ 'ಜಿನನಾಥಪುರ' ಎಂಬ ಒಂದು ಅಗ್ರಹಾರದಲ್ಲಿದೆ. ಇದನ್ನು ಕ್ರಿ.ಶ. 1135ರಲ್ಲಿ ಕಟ್ಟಲಾಯಿತು. ಅದು ಒಂದು ಗರ್ಭಗೃಹ ಸುಕನಾಸಿ ಮತ್ತು ನವರಂಗಗಳನ್ನು ಹೊಂದಿದೆ. ಪಾರ್ಶ್ವನಾಥನ ಮೂಲ ಮೂರ್ತಿಯ ಪ್ರತಿಯಾಗಿ, ಅಮೃತ ಶಿಲೆಯ ಮೂರ್ತಿಯನ್ನು ಇಡಲಾಗಿದೆ. ಸುಕನಾಸಿಯು ಧರಣೇಂದ್ರ ಮತ್ತು ಪದ್ಮಾವತಿಯ ಮೂರ್ತಿಗಳನ್ನು ಹೊಂದಿದೆ. ಕಟುರ್ವಿಂಸತಿ ತೀರ್ಥಂಕರ, ಸಂಕಪರಮೇಸ್ಟಿ ಮತ್ತು ಮೆರವಣಿಗೆಯ ಮೂರ್ತಿಯಾದ ನವದೇವತ ನಂದೀಶ್ವರ ಮೂರ್ತಿಗಳು ಸುಂದರವಾಗಿವೆ.

ಚಿಕ್ಕಬೆಟ್ಟ ಗುಡ್ಡದ ಮೇಲಿರುವ ಸವತಿ ಗಂಧವಾರಣ ಬಸದಿಯು ವಿಷ್ಣುವಧನನ ರಾಣಿಯಾದ ಶಾಂತಲೆಯಿಂದ ಕ್ರಿ.ಶ. 1123ರಲ್ಲಿ ಕಟ್ಟಲ್ಪಟ್ಟಿತು. ಶಾಂತಿನಾಥ ಪ್ರತಿಮೆಯು 5

ಅಡಿ ಎತ್ತರವಿದ್ದು ಇದರ ಅಕ್ಕಪಕ್ಕಗಳಲ್ಲಿ ಇಬ್ಬರು ಪುರುಷ ಚಾಮರ ಬೀಸುವವರಿದ್ದಾರೆ. ಸುಕನಾಸಿಯು ಕಿಂಪುರುಷ ಮತ್ತು ಮಹಾಮಾನಸಿಯ ಮೂರ್ತಿಗಳನ್ನು ಹೊಂದಿವೆ. ಇನ್ನೊಂದು ಗೋಡೆಯು ಸ್ಥಂಭಗಳನ್ನು ಹೊಂದಿದೆ ಮತ್ತು ದೇಗುಲವು ಒಂದು ಗೋಪುರವನ್ನು ಹೊಂದಿದೆ.

ಪಾರ್ಶ್ವನಾಥ ಬಸದಿಯು ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖ ಮಂಟಪಗಳನ್ನು ಹೊಂದಿದೆ. ಹೊರಗೋಡೆಯು ಸಣ್ಣ ಸ್ಥಂಭಗಳನ್ನು ಮತ್ತು ಗೋಪುರಗಳನ್ನು ಹೊಂದಿದೆ. ಪಾರ್ಶ್ವನಾಥ ಮೂರ್ತಿಯು ಮುಖ್ಯಮೂರ್ತಿಯಾಗಿದ್ದು 15 ಅಡಿ ಎತ್ತರವಿದೆ. ಇದರ ತಲೆಯ ಮೇಲೆ ಏಳು ಹೆಡೆಗಳ ಸರ್ಪವಿದೆ. ಬಹುಶಃ ಈ ಬಸದಿಯು ಸುಮಾರು ಕ್ರಿ.ಶ. 1129ರಲ್ಲಿ ಕಟ್ಟಿದ್ದಿರಬಹುದು.

ಮುಖ್ಯ ಪ್ರವೇಶ ದ್ವಾರದ ಎರಡೂ ಪಕ್ಕಗಳಲ್ಲಿ ದೊಡ್ಡ ಬೆಟ್ಟದಲ್ಲಿ ಅಖಂಡ ಬಾಗಿಲು ಭರತ ಮತ್ತು ಬಾಹುಬಲಿಯ ಪ್ರತಿಮೆಗಳಿವೆ. ಇವು ಸುಮಾರು ಕ್ರಿ.ಶ. 1130ರಲ್ಲಿ ಸೇನಾಧಿಪತಿ ಚಿಕ್ಕ ಭರತಮಯ್ಯನಿಂದ ಮಾಡಲ್ಪಟ್ಟಿರಬಹುದೆಂದು ತೋರುತ್ತದೆ.

ಚಂದ್ರಗುಪ್ತ ಬಸದಿಯ ಕಟಕಟೆಯು ಸುಮಾರು ಕ್ರಿ.ಶ. 1146ರಲ್ಲಿ ಸೇರಿಸಲ್ಪಟ್ಟವು. ಇದರ ಪ್ರವೇಶವು ಸುಂದರವಾಗಿ ಕೆತ್ತಲ್ಪಟ್ಟಿದೆ ಮತ್ತು ಕಟಕಟೆಯು ಮೊನಚಾದ ಶಿಲೆಯ ಕೆಲಸದಿಂದ ಕೂಡಿದೆ. ಬಾಗಿಲ ಹಾದಿಯಲ್ಲಿರುವ ಮುಂಭಾಗವು ಶೃತಕೇವಲಿ ಭದ್ರಬಾಹು ಮತ್ತು ಚಂದ್ರಗುಪ್ತನ ಕಥೆಯನ್ನು ವರ್ಣಿಸುತ್ತದೆ.

ಹೀಗೆ, ಧಾರ್ಮಿಕ ಉತ್ಸಾಹ ಮತ್ತು ಸಾಂಸ್ಕೃತಿಕ ಪ್ರಗತಿಯ ಫಲಿತಾಂಶರೂಪವಾಗಿ, ಅತ್ಯಂತ ಕುಶಲತೆಯಿಂದ ಕೂಡಿದ ಮತ್ತು ಕಲಾತ್ಮಕ ಶೈಲಿಯಿಂದ ನಿರ್ಮಾಣಗೊಂಡ ಅನೇಕ ಸುಂದರ ಕಲಾಕೃತಿಗಳನ್ನು ಕಾಣುತ್ತೇವೆ. ಇವು ಈ ಶತಮಾನಗಳಲ್ಲೆಲ್ಲಾ ಹೆಮ್ಮೆಯ ಮತ್ತು ಅಚ್ಚರಿಯ ಸ್ರೋತಗಳಾಗಿವೆ ಎಂಬುದರಲ್ಲಿ ಎರಡು ಮಾತಿಲ್ಲ.

### 7.5 ದೇವಾಲಯಗಳ ನಿರ್ಮಾಣದ ಚಟುವಟಿಕೆಗೆ ದಂಡನಾಯಕರ ಬೆಂಬಲ

ವಿಷ್ಣುವರ್ಧನ ಬುದ್ಧಿ ಮತ್ತು ಹೃದಯಗಳೆರಡರ ಗುಣವನ್ನು ಹೊಂದಿದವನಾಗಿದ್ದು ಕಲೆ ಮತ್ತು ವಾಸ್ತುಶಿಲ್ಪಗಳೆರಡನ್ನೂ ಪ್ರೋತ್ಸಾಹಿಸಿದನು. ಅವನ ಆಳ್ವಿಕೆಯಲ್ಲಿ ಹಿಂದೂ ದೇವಾಲಯಗಳ ಮತ್ತು ಜೈನ ಬಸದಿಗಳ ನಿರ್ಮಾಣವು ರಾಜ ರಾಣಿಯರು ಸೇನಾದಿಗಳಿಂದ ಮಾತ್ರವಲ್ಲ. ಶ್ರೀಮಂತ ವರ್ತಕರಿಂದಲೂ ಅಧಿಕ ಉತ್ತೇಜನವನ್ನು ಪಡೆಯಿತು. ಅವನ ಆಳ್ವಿಕೆಯು ಕರ್ನಾಟಕಕ್ಕೆ ಮಹಾನ್ ವೈಷ್ಣವ ಸಂತರಾದ ಶ್ರೀರಾಮಾನುಜರ ಆಗಮನವನ್ನು ಕಂಡಿತು. ನಿಜವಾಗಿಯೂ ಇವನ ಕಾಲವು ಅತ್ಯಂತ ಪ್ರಗತಿಪರ ಕಾಲವಾಗಿದ್ದು ವೈಷ್ಣವ, ಜೈನ

ಮತ್ತು ಶೈವ ಧರ್ಮಗಳು ಎಲ್ಲವೂ ಸೇರಿದಂತೆ ಹೊಯ್ಸಳ ಸಾಮ್ರಾಜ್ಯದಲ್ಲಿ ಅತ್ಯಂತ ಸುಂದರ ಮಂದಿರಗಳ ನಿರ್ಮಾಣವನ್ನು ಕಂಡವು. ಅವು ಹೀಗಿವೆ.

1) ವರಕೋಡು ಎಂಬಲ್ಲಿ (ಮೈಸೂರು ಜಿಲ್ಲೆ) ಇರುವ ಜೈನ ಬಸದಿ ಕ್ರಿ.ಶ. 1110 ರಲ್ಲಿ ಪುನಿಸಾಮಯ್ಯನಿಂದ ನಿರ್ಮಾಣ.
2) ದೊಡ್ಡಗಡ್ಡವುವಲ್ಲಿ ಸುಮಾರು ಕ್ರಿ.ಶ. 1117ರಲ್ಲಿ ವರ್ತಕನೋರ್ವನಿಂದ (ಮಹಾದೊಡ್ಡ ವ್ಯವಹಾರಿ) ಕಲ್ಹಣ, ರಾಹುತ್ತ ಮತ್ತವನ ಪತ್ನಿ (ಸುಹಜಾದೇವಿರವರಿಂದ ಕಟ್ಟಲ್ಪಟ್ಟ ಲಕ್ಷ್ಮೀ ದೇವಿ ಮಂದಿರ.
3) ಬೇಲೂರಿನಲ್ಲಿರುವ ಚನ್ನಕೇಶವ ಮಂದಿರ ಹೊಯ್ಸಳ ವಾಸ್ತುಶಿಲ್ದ ಅತ್ಯುತ್ತಮ ಕಲೆಯ ಮಾದರಿ. ಕ್ರಿ.ಶ. 1117ರಲ್ಲಿ ರಾಜಾ ವಿಷ್ಣುವರ್ಧನನಿಂದ ಕಟ್ಟಲ್ಪಟ್ಟಿತು.
4) ಬೇಲೂರಿನಲ್ಲಿ ಕೇಶವ ದೇವಾಲಯದ ಹೊರಮಿತಿಯಲ್ಲಿರುವ ಕಪ್ಪೆ ಚೆನ್ನಿಗರಾಯ ಮಂದಿರ ಕ್ರಿ.ಶ. 1117ರಲ್ಲಿ ರಾಣಿ ಶಾಂತಲಾದೇವಿಯಿಂದ ನಿರ್ಮಾಣಗೊಂಡಿತು.
5) ತಲಕಾಡಿನಲ್ಲಿರುವ ಕೀರ್ತಿನಾರಾಯಣ ಮಂದಿರ ಕ್ರಿ.ಶ. 1117ರಲ್ಲಿ ರಾಣಿ ಶಾಂತಲಾದೇವಿ ಯಿಂದ ಕಟ್ಟಲ್ಪಟ್ಟಿತು.
6) ದೋರಸಮುದ್ರದಲ್ಲಿ ಕ್ರಿ.ಶ. 1117ರಲ್ಲಿ ಕನ್ನಯನಾಯಕನಿಂದ ಕಟ್ಟಲ್ಪಟ್ಟ ಬಂಟೇಶ್ವರ ದೇವಾಲಯ.
7) ಶ್ರವಣಬೆಳಗೊಳದಲ್ಲಿ, ಗಂಗರಾಜನ ಪತ್ನಿಯಾದ ಲಕ್ಷ್ಮಿದೇವಿಯಿಂದ ಕಟ್ಟಲ್ಪಟ್ಟ ಎರಡು ಕಟ್ಟೆ ಬಸದಿ.
8) ಕ್ರಿ.ಶ. 1117ರಲ್ಲಿ ಶ್ರವಣಬೆಳಗೊಳದಲ್ಲಿ ಕಟ್ಟಲ್ಪಟ್ಟ ತೇರಿನ ಬಸದಿ.
9) ಕ್ರಿ.ಶ. 1117ರಲ್ಲಿ ಶ್ರವಣಬೆಳಗೊಳದಲ್ಲಿ ಈಚಿಮಯ್ಯನಿಂದ ಕಟ್ಟಲ್ಪಟ್ಟ ಶಾಂತೀಶ್ವರ ಬಸದಿ.
10) ಕ್ರಿ.ಶ. 1117ರಲ್ಲಿ ಈಶಪುರದಲ್ಲಿ ರಾಣಿ ಶಾಂತಲಾದೇವಿಯಿಂದ ಕಟ್ಟಿದ ರಾಮೇಶ್ವರ ಮಂದಿರ.
11) ಶಾಸನ ಬಸದಿ ಮತ್ತು ಕಟ್ಟಳೆ ಬಸದಿ ಎರಡೂ ಬಸದಿಗಳು ಸುಮಾರು ಕ್ರಿ.ಶ. 1118ರಲ್ಲಿ ಗಂಗರಾಜನಿಂದ ಕಟ್ಟಲ್ಪಟ್ಟವು.
12) ಕ್ರಿ.ಶ. 1118ರಲ್ಲಿ ಹೊಸಹೊಳಲು ಎಂಬಲ್ಲಿ ಕಟ್ಟಲ್ಪಟ್ಟ ಜೈನ ಬಸದಿ.
13) ಕತ್ತರಿಘಟ್ಟ ಎಂಬಲ್ಲಿ ಕ್ರಿ.ಶ. 1118ರಲ್ಲಿ ದೇಮಿಕಟ್ಟೆಯಿಂದ ಕಟ್ಟಲ್ಪಟ್ಟ ತ್ರಿಕೂಟ ಜಿನಾಲಯ.
14) ಗುಟ್ಟಾಲಯ (ಕಟಕಟೆ) ಗೊಮ್ಮಟೇಶ್ವರನ ಪ್ರತಿಮೆಯ ಸುತ್ತಲೂ ಶ್ರವಣಬೆಳಗೊಳದಲ್ಲಿ ಕ್ರಿ.ಶ. 1120ರಲ್ಲಿ ಸೇನಾಧಿಪತಿ ಗಂಗರಾಜನಿಂದ ಕಟ್ಟಲ್ಪಟ್ಟಿತು.
15) ಸವತಿ ಗಂಧಾವರಣ ಬಸದಿ ಶ್ರವಣ ಬೆಳಗೊಳದಲ್ಲಿ ಕ್ರಿ.ಶ. 1123ರಲ್ಲಿ ಶಾಂತಲಾ ದೇವಿಯಿಂದ ಕಟ್ಟಲ್ಪಟ್ಟಿದುದು.

16) ಸನೇಹಳ್ಳಿಯಲ್ಲಿರುವ 'ಜಕ್ಕವ್ವೆಯ ಬಸದಿ' ಎಂದು ಕರೆಯಲ್ಪಡುವ ಒಂದು ಜೈನ ದೇವಾಲಯ ಮತ್ತು ಜಕ್ಕಿಕಟ್ಟೆ ಎಂದು ಕರೆಯಲಾಗುವ ಒಂದು ಕೆರೆ-ಗಂಗರಾಜನ ಸಹೋದರನ ಪತ್ನಿಯಾದ ಜಕ್ಕನಬ್ಬೆಯಿಂದ ಕಟ್ಟಲ್ಪಟ್ಟವು.

17) ಕೇಶವ ಮಂದಿರ ಮರಾಳ ಎಂಬಲ್ಲಿ ಕ್ರಿ.ಶ. 1130ರಲ್ಲಿ ರಾಯಣ್ಣ ದಂಡನಾಯಕನಿಂದ ಕಟ್ಟಲ್ಪಟ್ಟಿತು.

18) ಸಿದ್ದೇಶ್ವರ ಅಥವಾ ಕಾಳೀದೇವ ಮಂದಿರ ಮರ್ಲೆ ಎಂಬಲ್ಲಿ ಕ್ರಿ.ಶ. 1130ರಲ್ಲಿ ಕಟ್ಟಲ್ಪಟ್ಟಿತು.

19) ತ್ರೈಲೋಕ್ಯ ರಂಜನ ಬಸದಿ ಶ್ರವಣಬೆಳಗೊಳದಲ್ಲಿ ಬೊಪ್ಪಣ್ಣ ಚೈತ್ಯಾಲಯ ಎಂಬಲ್ಲಿ ಕ್ರಿ.ಶ. 1133ರಲ್ಲಿ ಗಂಗರಾಜನ ಮಗನಾದ ಬೊಪ್ಪಣ್ಣ ದಂಡನಾಯಕನಿಂದ ಕಟ್ಟಲ್ಪಟ್ಟಿತು.

20) ಬಸ್ತಿಹಳ್ಳಿಯಲ್ಲಿರುವ ಪಾರ್ಶ್ವನಾಥ ಬಸದಿ – ದ್ರೋದಘರತ್ತ ಜಿನಾಲಯ ಕ್ರಿ.ಶ. 1133ರಲ್ಲಿ ಬೊಪ್ಪನಿಂದ ಕಟ್ಟಲ್ಪಟ್ಟಿತು.

21) ಶಾಂತೀಶ್ವರ ಬಸದಿ – ಕಂಬಡಹಳ್ಳಿಯಲ್ಲಿ ಕ್ರಿ.ಶ. 1133ರಲ್ಲಿ ಬೊಪ್ಪ ದಂಡನಾಯಕನಿಂದ

22) ಅಮೃತೇಶ್ವರ ಮಂದಿರ – ಅಗ್ರಹಾರ ಬೆಲ್‌ಗುಲಿಯಲ್ಲಿ ಕ್ರಿ.ಶ. 1134ರಲ್ಲಿ.

23) ನಾಗಮಂಗಲದಲ್ಲಿ ಶಂಕರನಾರಾಯಣ ಮಂದಿರ-ಕ್ರಿ.ಶ. 1138ರಲ್ಲಿ.

24) ಶ್ರವಣಬೆಳಗೊಳದಲ್ಲಿ ಕ್ರಿ.ಶ. 1138ರಲ್ಲಿ ಅರೆಗಲ್ ಬಸದಿ.

25) ಬೆಳಗೊಳದಲ್ಲಿ ಭಕ್ತೇಶ್ವರ ಮಂದಿರ.

26) ಚೆಲುವನಾರಾಯಣ ದೇವಸ್ಥಾನ-ಮೇಲುಕೋಟೆಯಲ್ಲಿ.

27) ದೋರಸಮುದ್ರದಲ್ಲಿ ವಿಷ್ಣುವರ್ಧನ ಜಿನಾಲಯ-ವಿಷ್ಣುವರ್ಧನನ ಸೈನ್ಯಾಧಿಕಾರಿ ವಿಷ್ಣು ದಂಡಧಿಪನಿಂದ ಕಟ್ಟಲ್ಪಟ್ಟಿತು.

28) ನಾಗಮಂಗಲದಲ್ಲಿ ಸೌಮ್ಯ ಕೇಶವ ಮಂದಿರ.

29) ಬಸ್ತಿಹಳ್ಳಿಯಲ್ಲಿರುವ ಆದಿನಾಥ ಬಸದಿ.

30) ಚಾಮುಂಡೇಶ್ವರಿ ದೇವಾಲಯ-ಉಂಡಿಗನಲ್‌ನಲ್ಲಿ ಮುಂಚೆತ್ತಿಯಿಂದ

31) ಲಕ್ಷ್ಮೀನಾರಾಯಣ ಮಂದಿರ-ತೊಣ್ಣೂರಿನಲ್ಲಿ ವಿಷ್ಣುವರ್ಧನನ ಕೈಕೆಳಗಿನ ಅಧಿಕಾರಿಯಾದ ಸುರಿಗೆಯ ನಾಗಯ್ಯನಿಂದ.

32) ಮಾಲಗುರು ಎಂಬಲ್ಲಿ ಬಾಳೇ ನಾಯಕನಿಂದ ಕಟ್ಟಲ್ಪಟ್ಟ ಹರಿಹರ ಮಂದಿರ.

33) ಶಿವಗಂಗೆಯಲ್ಲಿ ಒಂದು ಮಂಟಪ-ವಿಷ್ಣು ದಂಡಾಧಿಪನಿಂದ.

34) ಶ್ರವಣಬೆಳಗೊಳದಲ್ಲಿ ಸಣ್ಣ ಗುಡ್ಡದ ಮೇಲೆ ನಿಷಿಧಿ ಮಂಟಪಗಳು, ಲಕ್ಷ್ಮೀದೇವಿಯ ನಿಧನಾ ನಂತರ ಆಕೆಯ ನೆನಪಿಗಾಗಿ ಕಟ್ಟಲ್ಪಟ್ಟವು. ಲಕ್ಷ್ಮೀದೇವಿಯ ಸೋದರ ಬುಚಣ ಲಕ್ಷ್ಮೀದೇವಿಯ ಸೋದರಿ ದಮತಿ, ಪ್ರಭಾಚಂದ್ರ ಮತ್ತಿತರಿಂದ ಕಟ್ಟಲ್ಪಟ್ಟವು.

ಇವುಗಳಲ್ಲದೆ, ಮರಿಯಾನೆ ಕುಟುಂಬಕ್ಕೆ ಸೇರಿದ, ವಿಷ್ಣುವರ್ಧನನ ಮತ್ತೋರ್ವ ಸೇನಾನಿ. ಗಂಗಾವತಿ ವಿಭಾಗದಲ್ಲಿ 80 ಹೊಸ ಬಸದಿಗಳನ್ನು ಕಟ್ಟಿದ ಮತ್ತು 200 ಹಳೆಯ ಬಸದಿಗಳನ್ನು ನವೀಕರಿಸಿದ ಗೌರವಕ್ಕೆ ಪಾತ್ರನಾಗಿದ್ದಾನೆ. ಅದೂ ಅಲ್ಲದೆ, ಗಂಗರಾಜನ ಸೋದರನಾದ ಜಕ್ಕನಬ್ಬೆಯ ಪತಿಯು, ಕೋಪಣ, ಶ್ರವಣಬೆಳಗೊಳ ಮತ್ತಿತರ ಸ್ಥಳಗಳಲ್ಲಿ ಜೈನ ಮಂದಿರಗಳನ್ನು ಕಟ್ಟಿಸಿದ ನೆಂದು ಹೇಳಲಾಗಿದೆ. ಆದರೆ ಈ ಮಂದಿರಗಳನ್ನು ಗುರುತು ಹಚ್ಚುವುದು ಬಹಳ ಕಷ್ಟ ಮತ್ತು ಬಹುಶಃ ಇದು ಸ್ವಲ್ಪ ಉತ್ಪ್ರೇಕ್ಷೆ ಇರಬಹುದೆಂದು ತೋರುತ್ತದೆ.

ಹೀಗೆ ವಿಷ್ಣುವರ್ಧನನ ಆಳ್ವಿಕೆಯು ಹೆಚ್ಚಿನ ವಾಸ್ತುಶಿಲ್ಪದ ಚಟುವಟಿಕೆಗಳನ್ನು ಕಂಡಿದೆ. ಅದರಲ್ಲೂ ವಿಶೇಷವಾಗಿ ಗಂಗರಾಜ, ವಿಷ್ಣುವರ್ಧನನ ಪ್ರಸಿದ್ಧ ಸೇನಾನಿ ಮತ್ತು ಅವನ ಕುಟುಂಬದ ಸದಸ್ಯರು ಸೈನ್ಯ, ಸರಕಾರ, ಮತಧರ್ಮ ಮತ್ತು ಕಲೆ ಎಲ್ಲದರಲ್ಲೂ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಅವರು ಶ್ರವಣಬೆಳಗೊಳವನ್ನು ಜೈನ ಕಲೆ ಮತ್ತು ಧರ್ಮದ ಕೇಂದ್ರವನ್ನಾಗಿ ಮಾಡಿದರು.

### 7.6 ಆಸ್ಥಾನ ದೃಶ್ಯದಲ್ಲಿ ವಿಷ್ಣುವರ್ಧನ

ವಿಷ್ಣುವರ್ಧನನ ಆಸ್ಥಾನ ದೃಶ್ಯದಲ್ಲಿ ನಾಲ್ಕು ಸಮತಲ ವಿಭಾಗಗಳಿದ್ದವು. ಕೆಳಗಡೆ ಒಂದು ಮಣಿಗಳ ಸುರುಳಿಗಳಿಂದ ಮತ್ತು ಪುಷ್ಪಗಳ ಚಿತ್ತಾರದಿಂದ ಅಲಂಕೃತವಾದ ನೆಲವೊಂದನ್ನು ಬೆಂಬಲಿಸುತ್ತಿರುವ ಘರ್ಜಿಸುವ ಸಿಂಹಗಳಿವೆ. ಆಸ್ಥಾನದಲ್ಲಿ ಆ ಹಾಸಿನ ಮಧ್ಯೆಯ ಕೇಂದ್ರದಲ್ಲಿ ಮೆತ್ತನೆಯ ಆಸನದ ಮೇಲೆ ರಾಜನು ಆಸೀನನಾಗಿದ್ದಾನೆ. ಅವನ ಕೂದಲು ತಲೆಯ ಮೇಲೆ ಗಂಟಿನಲ್ಲಿ ಕಟ್ಟಲ್ಪಟ್ಟಿದೆ ಮತ್ತು ಅವನು ರತ್ನಖಚಿತ ಕಿರೀಟವನ್ನು ಧರಿಸಿದ್ದಾನೆ. ಬಹುದೊಡ್ಡ ಕರ್ಣ ಕುಂಡಲಗಳು ಕಿವಿಯ ಆಲೆಯ ಕೆಳಗಿನವರೆಗೂ ತೂಗಾಡುತ್ತಿದ್ದು ಅವು ಅವನ ಭುಜಗಳ ಮೇಲೆ ವಿಶ್ರಮಿಸಿವೆ. ಅಚ್ಚುಕಟ್ಟುಗೊಳಿಸಿದ ಗಡ್ಡ ಮತ್ತು ತಿರುವಿನ ಮೀಸೆಗಳು, ಹಾರಗಳು ಮತ್ತು ಯಜ್ಞೋಪವೀತ, ಅಲಂಕೃತವಾದ ಉಂಗುರಗಳು, ಸೊಂಟಪಟ್ಟಿಯಿಂದ ಕಟ್ಟಲ್ಪಟ್ಟ ಚಲ್ಲಣ, ತೋಳಿನ ಆಭರಣ ಮತ್ತು ಕಡಗ, ಮತ್ತು ಒಂದು ಸೊಂಟಪಟ್ಟಿ ಮತ್ತು ತನ್ನ ಬಲಗೈಲಿ ಖಡ್ಗವನ್ನು ಮತ್ತು ಎಡಗೈಯಲ್ಲಿ ವೀಳ್ಯವನ್ನು ಹಿಡಿದಿದ್ದಾನೆ ಮತ್ತು ಅವನ ಹಣೆಯಲ್ಲಿ ಜಾತಿಯ ಯಾವ ಚಿಹ್ನೆಯೂ ಇಲ್ಲ. ಆ ಮೂರ್ತಿಯು ಪೂರಾ ಜೀವತುಂಬಿ ಗಂಭೀರವಾಗಿದೆ. ಅದೇ ರೀತಿಯ ಆಸನದಲ್ಲಿ ಅವನ ಎಡಗಡೆಗೆ ಅವನ ಪತ್ನಿ ಬಹುಶಃ ಶಾಂತಲಾದೇವಿ ಆಸೀನಳಾಗಿದ್ದಾಳೆ. ಅವಳ ಕೂದಲು ಒಂದು ವಿಶಿಷ್ಟ ರೀತಿಯ ದೊಡ್ಡ ಚಿಟ್ಟಯಾಕಾರದ ಗಂಟಿನಲ್ಲಿ ಕಟ್ಟಲ್ಪಟ್ಟಿದೆ ಮತ್ತು ಅವಳೂ ದೊಡ್ಡ ಕರ್ಣಕುಂಡಲಗಳನ್ನೂ, ಕುತ್ತಿಗೆಯ ದಾರವನ್ನೂ, ತೋಳಬಂದಿಯನ್ನೂ ಅನೇಕ ಕಂಕಣಗಳನ್ನು, ಉಂಗುರಗಳನ್ನೂ, ಆಭರಣಗಳಿಂದ ಅಲಂಕೃತವಾದ ವಸ್ತ್ರವನ್ನೂ, ಭಾರವಾದ ಕುಚ್ಚುಗಳಿಂದ ಕೂಡಿದ ನಡುಪಟ್ಟಿಯನ್ನೂ ಅವಳ ಮೊಣಕಾಲುಗಳವರೆಗೆ ಇಳಿಬಿದ್ದಿರುವ

ಒಂದು ಮೇಲ್ವಸ್ತ್ರ ಅಥವಾ ದುಕೂಲವನ್ನು ಧರಿಸಿದ್ದಾಳೆ. ಅವಳ ಶರೀರದ ಮೇಲ್ಭಾಗವು ನಗ್ನವಾಗಿದೆ. ಅವಳು ಗಮನಕೊಟ್ಟು ಏನನ್ನೋ ಕೇಳುತ್ತಿದ್ದಾಳೆ. ತಾಂಬೂಲವನ್ನು ತನ್ನ ಎಡಗೈಯಲ್ಲಿ ಹಿಡಿದು, ಬಲಗೈಯಲ್ಲಿ ಮಡಿಸಿದ ತಾಂಬೂಲವನ್ನು ಇನ್ನೇನು ಬಾಯಿಗೆ ಹಾಕಿಕೊಳ್ಳುವುದರಲ್ಲಿದ್ದಾಳೆ. ಇದು ವಿಷ್ಣುವರ್ಧನನ ಪಟ್ಟದರಸಿಯಾದ ಶಾಂತಲಾದೇವಿ ಇರಬಹುದೆಂದು ತೋರುತ್ತದೆ. ತುಂಬಿದ ಆಸ್ಥಾನದಲ್ಲಿ ರಾಜನೊಂದಿಗೆ ಅವಳ ಸಾಹಚರ್ಯವು ಗಮನಾರ್ಹವಾದುದು.

ಹೀಗೆ ಹೊಯ್ಸಳರಸರಲ್ಲಿ ವಿಷ್ಣುವರ್ಧನನು ಅತ್ಯಂತ ಪ್ರಸಿದ್ಧನು ಮತ್ತು ಮೂವತ್ತನಾಲ್ಕು ವರ್ಷಗಳ ಅವನ ಆಳ್ವಿಕೆಯು ಬಹಳ ಪ್ರಮುಖವಾದುದು. ದ್ವಾರಸಮುದ್ರದ ಹೊಯ್ಸಳರ ಸಾಂಸ್ಕೃತಿಕ ಕೊಡುಗೆಗಳಲ್ಲಿ ಬಹಳ ಮಹತ್ತರವಾದುದೆಲ್ಲವೂ ಸಾಧಿತವಾಗಿದ್ದುದು ಇವನ ಆಳ್ವಿಕೆಯಲ್ಲಿ ಮಾತ್ರ. ಇವನ ಆಳ್ವಿಕೆಯು ಸಾಮ್ರಾಜ್ಯ ವಿಸ್ತಾರವನ್ನೂ ಮತ್ತು ರಾಜ್ಯದ ಸಂಪನ್ಮೂಲ ಗಳಲ್ಲಿ ಹೆಚ್ಚಳವನ್ನೂ ಕಂಡಿತು. ಇವನ ಆಳ್ವಿಕೆಯಲ್ಲಿ ಹೊಯ್ಸಳರು ನಿಜವಾಗಿಯೂ ಸ್ವತಂತ್ರ ರಾಗಿದ್ದರು. ವಿಷ್ಣುವರ್ಧನನು ತನ್ನ ಸಾಮ್ರಾಜ್ಯದ ಆರ್ಥಿಕ ಸಂಪನ್ಮೂಲಗಳಲ್ಲಿ ಹೆಚ್ಚಿನ ಭಾಗವನ್ನು ಬೇಲೂರು, ಹಳೇಬೀಡು ಮತ್ತು ಸೋಮನಾಥಪುರಗಳಲ್ಲಿ ಅತ್ಯಂತ ಸುಂದರ ಸ್ಮಾರಕಗಳನ್ನು ಕಟ್ಟಿಸಲು ಸಂಚಯಿಸಿ ವಿನಿಯೋಗಿಸಿದರು. ಇದು ಅಲ್ಪಾವಧಿಯಲ್ಲಿಯೇ ಆರ್ಥಿಕ ಪ್ರಗತಿಯ ಮಟ್ಟದ ದ್ಯೋತಕವಾಗಿದೆ. ಹೊಯ್ಸಳರ ಇತಿಹಾಸದಲ್ಲಿ ವಿಷ್ಣುವರ್ಧನನ ಆಳ್ವಿಕೆಯ ಕಾಲವು ಉಜ್ವಲ ವಾದುದು. ಸಾಮಾಜಿಕಾಭಿವೃದ್ಧಿಯ ದೃಷ್ಟಿಯಿಂದಲೂ ಅವನ ಆಳ್ವಿಕೆಯು ಅತಿಶಯವಾದುದು. ನಾವು ಅವನ ಆಳ್ವಿಕೆಯನ್ನು ಕರ್ನಾಟಕದಲ್ಲಿ ಸಾಮಾಜಿಕ ಸಮನ್ವಯ ಮತ್ತು ಹೊಸ ಸಮಾಜ ನಿರ್ಮಾಣದ ಉಗಮಕಾಲವೆಂದೂ ಕರೆಯಬಹುದು. ರಾಮಾಜುನರು ಗ್ರಹಿಸಿದಂತೆ ವೈದಿಕ ಬ್ರಾಹ್ಮಣರ ಧಾರ್ಮಿಕ ವಿಚಾರಗಳು, ವಿಷ್ಣುವರ್ಧನನು ಅವರ ಶಿಷ್ಯನಾದುದು ಹೊಸ ಸಾಮಾಜಿಕ ರಚನೆಗೆ ಭದ್ರ ಬುನಾದಿಯಾಯಿತು.

### 7.7 ದಂಡನಾಯಕರು ಮತ್ತು ಲಲಿತಕಲೆಗಳು

ಹೊಯ್ಸಳರ ಕಾಲದಲ್ಲಿ ಲಲಿತ ಕಲೆಗಳನ್ನು ಅಭ್ಯಸಿಸಿ, ಪ್ರವರ್ಧಮಾನಕ್ಕೆ ತಂದವರು ಮುಖ್ಯವಾಗಿ ದಂಡನಾಯಕರ ಕುಟುಂಬಕ್ಕೆ ಸೇರಿದ ಸ್ತ್ರೀಯರು. ಈ ಕೆಳಕಂಡ ಉದಾಹರಣೆಗಳು ಈ ಮೇಲಣ ಹೇಳಿಕೆಯನ್ನು ಸಮರ್ಥಿಸುತ್ತವೆ. ದೇವದಾಸಿಯರಿಗೆ ಆಶ್ರಯವನ್ನಿತ್ತ ಕಾರಣ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಲಲಿತ ಕಲೆಗಳು ಪೋಷಿಸಲ್ಪಟ್ಟವು.

ಹೊಯ್ಸಳ ರಾಣಿ ಶಾಂತಲಾದೇವಿ ಮಂತ್ರಿ ಮಾರಸಿಂಗ ಮತ್ತು ಸಾಧು ಸ್ವಭಾವದ ಮಾಚಿಕಟ್ಟೆಯ ಮಗಳು ತನ್ನ ಸೌಂದರ್ಯಕ್ಕೂ, ಬುದ್ಧಿವಂತಿಕೆಗೂ ಪ್ರಸಿದ್ಧಳಾಗಿದ್ದಳು.

ಆಕೆಯು ಲಲಿತ ಕಲೆಗಳಲ್ಲಿ ಪ್ರವೀಣೆಯಾಗಿದ್ದಳು. ಅದರಲ್ಲೂ ನೃತ್ಯದಲ್ಲಿ ಆಕೆಯು ಮಹಾನ್ ಹೊಯ್ಸಳರಸ ವಿಷ್ಣುವರ್ಧನನನ್ನು ವರಿಸಿದ್ದಳು. ಆಕೆಯು ಯುದ್ಧಭೂಮಿಯಲ್ಲಿ ತನ್ನ ಪತಿಗೆ ಸ್ಫೂರ್ತಿಯ ಚಿಲುಮೆ ಯಾಗಿದ್ದಳು. ರಾಜ್ಯಾಡಳಿತದಲ್ಲೂ ಉತ್ತಮ ಸಲಹೆಗಾರಳಾಗಿದ್ದಳು. ಅಷ್ಟೇ ಅಲ್ಲ, ಕೆಲವೊಮ್ಮೆ ಆಡಳಿತದ ಜವಾಬ್ದಾರಿಯನ್ನೂ ಹೊರುತ್ತಿದ್ದಳು. ಆಕೆಯು ಆಧ್ಯಾತ್ಮಿಕ ವಿಷಯದಲ್ಲಿಯೂ ಉನ್ನತ ಮಟ್ಟಕ್ಕೇರಿದ್ದಳು. ಆಕೆಯು ಶೈವ, ಶ್ರೀವೈಷ್ಣವ ಮತ್ತು ಜೈನಧರ್ಮ ಮೊದಲಾದ ಎಲ್ಲಾ ಧರ್ಮಗಳಲ್ಲಿಯೂ ಸಮಾನ ಗೌರವ ತೋರಿದ್ದಳು. ಆದರೆ, ಆಕೆಗೆ ಜೈನ ಧರ್ಮದಲ್ಲಿ ವಿಶೇಷ ಭಕ್ತಿ ಪ್ರೀತಿಗಳಿದ್ದವು. ಕ್ರಿ.ಶ. 1117ರಲ್ಲಿ ಆಕೆಯು ಕಪ್ಪೆ ಚೆನ್ನಿಗರಾಯನ ದೇವಾಲಯವನ್ನು ಪ್ರತಿಷ್ಠಾಪಿಸಿದಳು. ಆಕೆಯು ಶ್ರವಣಬೆಳಗೊಳದಲ್ಲಿ ಸುಂದರವಾದ ಸವತಿಗಂಧಾವರಣ ಬಸದಿಯನ್ನು ಕಟ್ಟಿಸಿ, ಅದಕ್ಕೆ ಅನೇಕ ವಿಧವಾದ ಉಡುಗೊರೆಗಳನ್ನಿತ್ತಳು. ಅಂತಿಮವಾಗಿ ಶಿವಗಂಗೆಯಲ್ಲಿ ಜೈನ ವ್ರತವಾದ ಸಲ್ಲೇಖನ ವ್ರತವನ್ನು ಕೈಗೊಂಡು ಆ ಮೂಲಕ ಮೃತ್ಯುವಿಗೆ ಆಧ್ಯಾತ್ಮಿಕ ಸ್ವಾಗತವನ್ನು ಕೋರಿದಳು.

ದೇವದಾಸಿ ಎಂದರೆ ಅಕ್ಷರಶಃ ದೇವರ ಸೇವಕಿ ಅಥವಾ ಗುಲಾಮಳು ಎಂದರ್ಥ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಸರ್ವಶಕ್ತನಾದ ಭಗವಂತನ ಸೇವೆಗೆ ಅವಳು ಮುಡಿಪು ಎಂದರ್ಥ. ಆಕೆಯು ದೇವಾಲಯ ಒಂದರಲ್ಲಿ ತನ್ನ ಸಂಗೀತ ಮತ್ತು ನೃತ್ಯದ ಮೂಲಕ ದೇವರಿಗೆ ಸೇವೆ ಸಲ್ಲಿಸಿ ತನ್ನ ಜೀವನಕ್ಕಾಗಿ ಗಳಿಸಲು ಆಕೆಗೆ ಅನುಮತಿ ಇತ್ತು. ಈ ಪದ್ಧತಿಯು ದೇವಾಲಯಗಳಿಗೆ ಹೆಣ್ಣುಮಕ್ಕಳನ್ನು ಅರ್ಪಿಸುವ ಪದ್ಧತಿಯಲ್ಲಿ ಹುಟ್ಟು ಪಡೆಯಿತು. ಈ ಹುಡುಗಿಯರು ದೇವಾಲಯಗಳನ್ನು ಸ್ವಚ್ಛ ಮಾಡುವುದು, ದೀಪಗಳನ್ನು ಹೊತ್ತಿಸುವುದು, ದೇವಾಲಯಗಳನ್ನು ಅಲಂಕರಿಸುವುದು, ಅಷ್ಟೇ ಅಲ್ಲ, ಹಬ್ಬದ ದಿನಗಳಲ್ಲಿ ಮತ್ತು ವಿಶೇಷ ಸಮಾರಂಭದ ದಿನಗಳಲ್ಲಿ ಹಾಡುವುದು, ನರ್ತಿಸುವುದು. ಇವೇ ಮೊದಲಾದ ಕರ್ತವ್ಯಗಳನ್ನು ಮಾಡಬೇಕಿತ್ತು. ಕ್ರಿ.ಶ. 1007ನೇ ವರ್ಷದ ದಾಖಲೆಯೊಂದು ಅತ್ಯಂತ ಪ್ರಸಿದ್ಧ ಮತ್ತು ಸಾತ್ವಿಕಳಾದ ಅತ್ತಿಮಬ್ಬೆಯ ಬಗ್ಗೆ ತಿಳಿಸುತ್ತಾ ಹೀಗೆ ಹೇಳಿದೆ. ಈ ದೇವದಾಸಿಯು ಅವಳೇ ಕಟ್ಟಿಸಿದ ಬಸದಿಯಲ್ಲಿ ನೆಲಸಿದ್ದಾಳೆ.

ದೇವದಾಸಿಯರು ದಾನಿಗಳೂ ಸಹ ಆಗಿದ್ದರು. ದೇವಸ್ಥಾನಗಳಿಗೆ ಅನೇಕ ವಿಧವಾದ ಉಡುಗೊರೆಗಳನ್ನು ಕೊಡಲು ಸಮರ್ಥರಾಗಿದ್ದರು.

ಕಾಳವ್ವೆ, ಲಕ್ಕವ್ವೆ, ಚಂದವ್ವೆ, ಕಲ್ಲವ್ವೆ, ಮಾದವ್ವೆ, ನಾಗವ್ವೆ ಇವರು ಹೊಯ್ಸಳ ಕಾಲದ ಬಹುಮುಖ್ಯ ನರ್ತಕಿಯರಾಗಿದ್ದರು.

ಹೀಗೆ ದಂಡನಾಯಕರ ಕುಟುಂಬವು ಲಲಿತಕಲೆಗಳನ್ನು ಪ್ರೋತ್ಸಾಹಿಸುವುದರಲ್ಲಿ ಅನೇಕ ಹಂತಗಳಲ್ಲಿ ಜವಾಬ್ದಾರರಾಗಿದ್ದರು. ಆಳುವ ವರ್ಗದ ಅತಿಶ್ರೇಷ್ಟ ಸ್ತ್ರೀಯರಲ್ಲಿ ಕೆಲವರು ತಾವೇ ಸ್ವತಃ ನೃತ್ಯ ಮತ್ತು ಸಂಗೀತವನ್ನು ಬಲ್ಲವರಾಗಿದ್ದರು ಮತ್ತು ಇತರರು ಅವುಗಳನ್ನು ಪ್ರೋತ್ಸಾಹಿಸಿದರು ಮತ್ತು ಹೊಯ್ಸಳ ದೇವಾಲಯಗಳಿಗೆ ಸೇರಿದ್ದ ದೇವದಾಸಿಯರ ಮೂಲಕ ಸಂಬಂಧಪಟ್ಟ ಲಲಿತಕಲೆಗಳು ಪ್ರೋತ್ಸಾಹ ಪಡೆದವು.

# ಅಧ್ಯಾಯ 8
## ಉಪಸಂಹಾರ

ಅಧ್ಯಯನದಿಂದ ಹೊರಬೀಳುವ ಕೆಲವು ಮುಖ್ಯ ಸಾಮಾನ್ಯ ತರ್ಕಗಳನ್ನು ಇಲ್ಲಿ ಗಮನಿಸ ಬಹುದಾಗಿದೆ.

ಹೊಯ್ಸಳ ಸಾಮ್ರಾಜ್ಯದ ದಂಡನಾಯಕರನ್ನು ಜೈನ ಮತ್ತು ಹಿಂದೂ ಧಾರ್ಮಿಕ ಹಿನ್ನಲೆಯಲ್ಲಿ ಆಯ್ಕೆ ಮಾಡಲಾಗುತ್ತಿತ್ತು. ಇದು ಆ ಕಾಲದ ಧಾರ್ಮಿಕ ರೀತಿನೀತಿಗಳಿಗನು ಗುಣವಾಗಿ ಇತ್ತು. ಜೈನ ಅಧಿಕಾರಿಗಳು ಮತ್ತು ಪಾಳೆಯಗಾರರು ಅವರ ಅಪ್ರತಿಮ ಪ್ರತಿಭೆಯಿಂದ, ಹೊಯ್ಸಳರ ಪ್ರೀತಿ ಪಾತ್ರರಾಗಿದ್ದರು. ಗಂಗರಾಜ, ಹುಲ್ಲ, ಪುನಿಸಾಮಯ್ಯ ಈ ವರ್ಗಕ್ಕೆ ಸೇರಿದವರು. ಅದೇ ರೀತಿ ಹಿಂದೂ ದಂಡನಾಯಕರು, ಶೈವಧರ್ಮ ಮತ್ತು ವೈಷ್ಣವ ಧರ್ಮದ ಪಂಗಡಗಳಿಂದ ಆಯ್ಕೆಯಾಗುತ್ತಿದ್ದರು. ಸೋಮನಾಥ ದಂಡನಾಯಕನು ಇವರಲ್ಲಿ ಅದ್ವಿತೀಯ ನಾಗಿದ್ದನು. ಇವನ ಧಾರ್ಮಿಕ ನಂಟು ಶೈವ ಮತದ ಕಡೆಗಿತ್ತು. ದಂಡನಾಯಕರು, ಅವರ ಧಾರ್ಮಿಕ ನಂಟು ಯಾವುದೇ ಇರಲಿ, ಸಾಮ್ರಾಜ್ಯದ ರಾಜಕೀಯ ಸ್ಥಿರತೆಯ ಸಾಮಾನ್ಯ ಹಿತಕ್ಕಾಗಿ ಶ್ರಮಿಸುತ್ತಿದ್ದರು/ದುಡಿಯುತ್ತಿದ್ದರು. ಹೊಯ್ಸಳ ದಂಡನಾಯಕರ ಸಾಮಾಜಿಕ ಹಿನ್ನಲೆಯು ಬಹಳ ಸ್ವಾರಸ್ಯಕರವಾದುದು. ಏಕೆಂದರೆ ಬ್ರಾಹ್ಮಣೇತರರೇ ಮೇಲುಗೈಯಾಗಿರುವಂತೆ ತೋರುವುದು. ಆ ಕಾಲದ ದಂಡನಾಯಕರು ಅವರ ಸಾಮಾಜಿಕ ಮತ್ತು ಧಾರ್ಮಿಕ ನಂಟುಗಳೇನೇ ಇರಲಿ, ಅವರು ಒಂದು ಸಾಮಾನ್ಯ ಸಾಮಾಜಿಕ ವಿಚಾರವನ್ನು ಹೊಂದಿದ್ದರು. ಆ ವಿಚಾರವೆಂದರೆ ವರ್ಣಾಶ್ರಮ ಧರ್ಮಕ್ಕೆ ಒತ್ತು ನೀಡಿದ ಮನುಧರ್ಮ. ದಂಡನಾಯಕರೂ ಇದನ್ನೇ ಎತ್ತಿ ಹಿಡಿದಿದ್ದರು. ಆದಾಗ್ಯೂ, ರಾಮಾನುಜರ ಭಕ್ತಿ ಚಳುವಳಿಯ ಕಾರಣದಿಂದ ಹೊಯ್ಸಳ ಸಾಮ್ರಾಜ್ಯದಲ್ಲಿ ವರ್ಣಾಶ್ರಮ ಧರ್ಮದ ಬಿಗಿಯು ಎಷ್ಟೋ ಪಾಲು ಸಡಿಲವಾಗಿತ್ತು. ಆದರೂ, ಸ್ಥಳೀಯ ಪದ್ಧತಿಗಳನ್ನು ಮತ್ತು ಸಂಪ್ರದಾಯಗಳನ್ನೇ ದಂಡನಾಯಕರು ಮಾನ್ಯ ಮಾಡಿದ್ದರು ಮತ್ತು ಈ ಅರ್ಥದಲ್ಲಿ ನಾವು ಅವರು ಆಡಳಿತದ ಎಲ್ಲಾ ಹಂತಗಳಲ್ಲಿಯೂ, ಸಂಪ್ರದಾಯವಾದಿ ಗಳಾಗಿದ್ದರೆಂದು ಹೇಳಬಹುದು.

ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ರಾಜ್ಯವು ವಿಸ್ತರಿಸಿತು. ಅವನು ಮಹಾನ್ ಹೊಯ್ಸಳ ಸಾಮ್ರಾಟರಲ್ಲಿ ಒಬ್ಬನು. ಅವನು, ಸಾಮ್ರಾಜ್ಯ ವಿಸ್ತರಣೆಗೆ ಕಾರಣಕರ್ತರಾದ ಅನೇಕ ಸಮರ್ಥ ಸೈನ್ಯಾಧಿಕಾರಿಗಳನ್ನು ಹೊಂದಿದ್ದನು. ವಿಷ್ಣುವರ್ಧನನು ದಂಡನಾಯಕರನ್ನು ಗೌರವಿಸಿದನು. ಯುದ್ಧ ಭೂಮಿಯಲ್ಲಿ ಅವರ ಸಾಧನೆಗಳಿಗಾಗಿ ಅವರಿಗೆ ಭೂಮಿಯನ್ನೂ ಮತ್ತು ಬಿರುದುಗಳ ನ್ನಿತ್ತನು. ಪ್ರತಿಭೆಯ ಆಧಾರದ ಮೇಲೆಯೇ ಅವರ

ನೇಮಕಾತಿ ಆಗುತ್ತಿತ್ತು. ಸಾಮಂತ ಸೋಮ, ಕೌಶಿಕಕುಳ್ಳ, ಮಹಾಸಾಮಂತ ದುಮ್ಮೇಯ ನಾಯಕರ ಕುಟುಂಬಗಳು ಮತ್ತು ಮರಿಯ ದಂಡನಾಯಕನ ಕುಟುಂಬಗಳು ವಿಷ್ಣುವರ್ಧನನನ್ನು ಆಡಳಿತ, ಯುದ್ಧ ಮತ್ತು ವಿಜಯಗಳಲ್ಲಿ ಸೇವೆ ಸಲ್ಲಿಸಿದುವು.

ಸಾಮಂತ ಸೋಮ, ದೇವರಾಜ, ಮರಿಯಾನೆ ದಂಡನಾಯಕ, ಗಂಗರಾಜ, ಪುನಿಸಾಮಯ್ಯ, ವಿಷ್ಣುವರ್ಧನನ ಕಾಲದಲ್ಲಿ ಪ್ರಸಿದ್ಧ ದಂಡನಾಯಕರಾಗಿದ್ದರು. ಇವರಲ್ಲಿ ಗಂಗರಾಜನು ಈಗ ಹೇಳಿದ ಕಾಲದ ಅತ್ಯಂತ ಪ್ರಸಿದ್ಧನು.

ಆಡಳಿತ ವರ್ಗವು ಒಂದು ರೀತಿಯಲ್ಲಿ ಹೊಯ್ಸಳರ ಆಡಳಿತದಲ್ಲಿ ಮಧ್ಯ ಹಂತವನ್ನು ಆಕ್ರಮಿಸಿದ್ದಿತು ಮತ್ತು ಇವರ ಮೇಲೆ ಅತ್ಯುನ್ನತ ಪರಮಾಧಿಕಾರ ರಾಜನದಾಗಿತ್ತು. ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ದಂಡನಾಯಕರು ಮಂತ್ರಿಗಳಾಗಿದ್ದರು. ದಂಡನಾಯಕ ಪುಯಿಸಮಯ್ಯ ಶಾಂತಿ ಪಾಲನೆಯ ಮಂತ್ರಿಯಾಗಿದ್ದನು. ಗಂಗರಾಜನೂ ಸಹ ಇದೇ ಅವಧಿಯಲ್ಲಿ ಒಬ್ಬ ಪ್ರಸಿದ್ಧ ಮಂತ್ರಿಯಾಗಿದ್ದನು.

ಉಚ್ಚತಮ ಅಧಿಕಾರವು/ಪ್ರಭುವು ಆಡಳಿತದ ಆದರ್ಶ ಮತ್ತು ಯಥಾರ್ಥತೆಯ ಕ್ಷೇತ್ರಗಳೆರಡರಲ್ಲೂ ಮಾದರಿಯಾಗಿ ವರ್ತಿಸುತ್ತಿದ್ದನು. ಮುಖ್ಯವಾದ 'ಧರ್ಮ' ಎಂಬ ವಿಚಾರವು ಉನ್ನತ ಅಧಿಕಾರದ ಚಟುವಟಿಕೆಗಳಲ್ಲೆಲ್ಲಾ ಪ್ರಮುಖ ಪಾತ್ರ ವಹಿಸುತ್ತಿತ್ತು. ಕೇಂದ್ರದ ಮಟ್ಟದಲ್ಲಿ ದಂಡನಾಯಕರು ಅಪ್ರತಿಮರಾಗಿದ್ದರು ಮತ್ತು ಕೆಲಸಕ್ಕೆ ಒಳ್ಳೆಯ ಅರ್ಹ ವ್ಯಕ್ತಿಗಳಾಗಿದ್ದರು. ಅವರು ಪರಮಾಧಿಕಾರ/ರಾಜಕ್ಕೂ ಮತ್ತು ಆಳುವ ಅಧಿಕಾರಿಗಳಿಗೂ ನಡುವೆ ಕೊಂಡಿಯಂತಿದ್ದರು.

ಹೊಯ್ಸಳ ಪ್ರಭು ವಿಷ್ಣುವರ್ಧನನ ಆಳ್ವಿಕೆಯಲ್ಲಿ ದಂಡನಾಯಕರು ಮುಖ್ಯ ಆಧಾರ ಸ್ಥಂಭಗಳಾಗಿದ್ದರು. ಬ್ರಾಹ್ಮಣರು ಮೊದಲಿನಿಂದಲೂ ಭೂಮಿಯನ್ನೂ, ಹಣವನ್ನು ದಾನವಾಗಿ ಪಡೆಯುತ್ತಿದ್ದರು. ಈ ರೀತಿ ಬ್ರಾಹ್ಮಣರಿಗೆ ದಾನವಾಗಿ ಕೊಡಲ್ಪಟ್ಟ ಗ್ರಾಮವನ್ನು 'ಅಗ್ರಹಾರ'ವೆಂದು ಕರೆಯುತ್ತಿದ್ದರು. ಹೊಯ್ಸಳ ದಂಡನಾಯಕರು ಆ ರೀತಿ ಅನೇಕ ಅಗ್ರಹಾರಗಳನ್ನು ಸೃಷ್ಟಿಸಿದರು.

ದಂಡನಾಯಕರು ದೇವಾಲಯದ ಕಟ್ಟಡಗಳ ನಿರ್ಮಾಣವನ್ನು ಬೆಂಬಲಿಸಿದರು ಮತ್ತು ಕೆರೆಗಳನ್ನು ಸಾಮ್ರಾಜ್ಯದ ಅನೇಕ ಭಾಗಗಳಲ್ಲಿ ಕಟ್ಟಿಸಿದರು. ಶಿಕ್ಷಣಕ್ಕೂ ಅವರಿಂದ ಪ್ರೋತ್ಸಾಹ ಲಭಿಸಿತು. ಅವರು ಧರ್ಮ ಸಹಿಷ್ಣುತೆಯ ನೀತಿಯನ್ನು ಅನುಸರಿಸಿದರು. ಶೈವಧರ್ಮ, ವೈಷ್ಣವ ಮತ್ತು ಜೈನ ಧರ್ಮಗಳನ್ನು ಪ್ರೋತ್ಸಾಹಿಸಿದರು. ದಂಡನಾಯಕರು ದೇವಾಲಯಗಳಿಗೆ ಉದಾರವಾಗಿ ಧನಸಹಾಯ ಮಾಡಿದರು. ಈ ಕಾಲದಲ್ಲಿ ಅವರ

ಪತ್ನಿಯರು, ಹೆಣ್ಣುಮಕ್ಕಳು, ಗಂಡುಮಕ್ಕಳು, ಸಹೋದರ, ಸಹೋದರಿಯರೂ ಮತ್ತು ತಾಯಂದಿರೂ ಸಹ ದೇವಾಲಯಗಳಿಗೆ ಉದಾರವಾಗಿ ದಾನ ಮಾಡಿದ್ದರು.

ದಂಡನಾಯಕರು ಲಲಿತ ಕಲೆಗಳಲ್ಲಿ ಹೆಚ್ಚು ಆಸಕ್ತಿ ವಹಿಸಿದ್ದರು. ಈ ಕಾಲದಲ್ಲಿ ದೇವದಾಸಿಯರಿಗೆ ಆಶ್ರಯವನ್ನಿತ್ತಿದ್ದರು. ಮಂದಿರಗಳ ನಿರ್ಮಾಣವು ಈ ಕಾಲದಲ್ಲಿ ಪರೋಕ್ಷವಾಗಿ ದೇವಾಲಯಗಳ ಸುತ್ತ ಈ ಕಲೆಗಳನ್ನು ಬೆಳೆಸುವುದರಲ್ಲಿ ಸಹಾಯ ಮಾಡಿತು.

ಹೀಗೆ, ಮೇಲಿನ ಎಲ್ಲಾ ನಿದರ್ಶನಗಳೂ ಈ ಕಾಲದಲ್ಲಿ ಶೈವ, ವೈಷ್ಣವ ಮತ್ತು ಜೈನ ಮಂದಿರಗಳ ನಿರ್ಮಾಣದ ಚಟುವಟಿಕೆಗಳು, ದಂಡನಾಯಕರಿಂದ ನಡೆಯುತ್ತಿದ್ದವೆಂಬುದನ್ನು ತೋರಿಸುತ್ತವೆ. ಈ ದೇವಾಲಯಗಳು ಮತ್ತು ಶಿಲಾಲೇಖಗಳಲ್ಲಿ ವರ್ಣಿಸಲ್ಪಟ್ಟಿರುವ ದೇವಾಲಯಗಳು, ಹೊಯ್ಸಳರಸ ವಿಷ್ಣುವರ್ಧನನಿಗೆ ಮತ್ತು ಅವನ ಕಲೆ ಮತ್ತು ವಾಸ್ತುಶಿಲ್ಪಗಳ ಮಹಾ ಪೋಷಕರಾದ ನಿಷ್ಠಾವಂತ ಅಧಿಕಾರಿಗಳಾದ ದಂಡನಾಯಕರಿಗೆ ಹೆಚ್ಚಿನ ಗೌರವ ಪ್ರತಿಷ್ಠೆಗಳನ್ನು ತಂದುಕೊಟ್ಟಿವೆ.

# BIBLIOGRAPHY

## HOYSALA PERIOD

### Primary Sources


Andhra Pradesh Report on Epigraphy for 1966
By Venkataramanayya, N., Hyderabad, 1970

Annual Reports of Indian Epigraphy, 1946 onwards, Delhi.

Annual Reports of the Archaeological Survey of India, 1887 onwards

Annual Reports of the Mysore Archaeological Department, 1906, onwards, Bangalore.

Annual Reports on South Indian Epigraphy, 1887 onwards, Madras.

Bombay-Karnataka Inscription
Vol. I, Part I (ed.) Krishnamacharlu, C.R., Madras, 1940.
Vol. I, Part II (ed.), Lakshminarayan Rao, N., Madras, 1953.
Vol. II (ed.), Desai, P.B., Delhi, 1964.
Vol. III (ed.) Lakshminarayan Rao, N.
Vol. IV (ed.), Gai, G.S., Delhi, 1965.

A Catalogue of Inscriptions copied upto 1964, by Parabrahma Sastri, P.V., Hyderabad, 1965.

A corpus of Inscriptions of the Madras Presidency collected till 1915 with Notes and References by Rangacharya, V., 3 Vols., Madras, 1917.

Epigraphic Carnatica, Vols. I-VIII (Rev. Ed.),
Gopal, B.R. (Pub.), University of Mysore.

Vol. I, Coorg District, 1972.

Vol. II, Sravanabelagola, 1973.

Vol. III, Mysore District (Gundlupete, Nanjangud and Heggadaevanakote Taluks), 1974.

Vol. IV, Mysore District (Chamarajanagara, Yelanduru, Kollegala, Hunsur and Piriyapattana Taluks), 1975.

Vol. V, Mysore District (Krishnarajanagara, Mysore and T. Narasipura Taluks), 1976.

Vol. VI, Mandya District (Krishnarajapetw, Pandavapura and Srirangapattana Taluks), 1977.

Vol. VII, Mandya District (Nagamangala, Mandya, Madduru, Malavalli Taluks), 1979.

Vol. VIII, Hassan District (Holenarasipura, Arakalgudu, Hassan and other Taluks), 1984.

Epigraphia Carnatica Volumes (Ed.), Rice, B.L. Vol. I, Coorg Inscriptions, Bangalore, 1886. Revised edition, Madras, 1914.

**Epigraphia Carnatica Volumes (Ed.), Rice, B.L.**

Vol. II, Inscriptions at Sravanabelagola, Bangalore,1889. Revised edition by Narasimhachar, R., Bangalore, 1923.

Vol. III, Inscriptions in the Mysore District, Part I, Bangalore, 1894.

Vol. IV, Inscriptions in the Mysore District, Part Ii, Bangalore, 1898.

Vol. V, Inscriptions in the Hassan District, Mangalore, 1902.

Vol. VI, Inscriptions in the Kadur District, Bangalore, 1901.

Vol. VII, Inscriptions in the Shimoga District, Part I, Bangalore, 1902.

Vol. VIII, Inscriptions in the Shimoga District, Part II, Bangalore, 1904.

Vol. IX, Inscriptions in the Bangalore District, Bangalore, 1905.

Vol. X, Inscriptions in the Kolar District, Section I, Mangalore, 1905; Section II, Bangalore, 1905.

Vol. XI, Inscriptions in the Chitaldoorg District, Bangalore, 1903.

Vol. XII, Inscriptions in the Tumkur District, Bangalore, 1904.

**Epigraphia Carnatica Volumes (Ed.), Rice, B.L.**

Vol. XIII, General Index, Part I, Krishna, M.H., Bangalore, 1934.

Vol. XIV, Supplementary Inscriptions in the Hassan District (Ed.), Krishna, M.H., Mysore, 1943.

Vol. XV, Supplementary Inscriptions in the Hassan District (Ed.), Krishna, M.H., Mysore, 1943.

Vol. XVI, Supplementary Inscriptions in the Tumkur District (Ed.), Nilakanta Sastri, K.A., Mysore, 1955.

Vol. XVII, Supplementary Inscriptions in the Kolar District, (Pub.), Dr. Seshadri, M., Mysore, 1965.

Supplementary Inscriptions in the Shimoga District, Vols. VII and VIII (Pub.), Dr. Seshadri, M., Mysore, 1970.

Epigraphia Indica, 1892 onwards, Calcutta/Delhi. Kannada Inscriptions from Madras Presidency, Parts I and II (ed.), Shama Sastry, R., Madras, 1939, 1941.

Karnataka Inscriptions

Vols. I, II, III, Part I (ed.) Panchamukhi, r.S., Dharwad, 1941, 1952, 1953.

Vol, IV (ed.), Annigeri, A.M., Dharwad, 1961.

Vol. V (ed.), Gopal, B.R., Dharwad, 1969.

## Secondary Sources

### Books in English

| | | |
|---|---|---|
| Altekar | : | State Government in Ancient India, Delhi. |
| Acharya, P.K | : | Indian Architecture accotding to manasara Silpasastra, Patna, 1979. |
| Aiyangar, S.K. | : | Ancient India and South Indian History and Culture, Poona, 1941. |
| Annaraya, Appanna | : | Swami Samantabhadracharya, |
| Mirji, (Dr.) | : | Ratnakarandaka Sravokachara, Sholapura, 1960. |
| Aiyangar, S.K. | : | Contributions of South India to Indian Culture, Calcutta, 1923. |
| Altekar, A.S. | : | Education of Ancient India, Varanasi, 1957. |
| Do. | : | The Position of Women in Hindu civilization, Delhi, 1962. |
| Appadurai, A. | : | Economic Conditions in Southern India, Vols. I andII, Madras, 1936. |

| | |
|---|---|
| Bhandarkar, R.G. | : Vaishnavism, Saivism and Other Minor Religions, Poona, 1929. |
| Bulher, G. | : Indian Palaeography, Calcutta, 1959. |
| Basavaraju, K.R. | : History and Culture of Karnataka, Dharwad, 1984. |
| Basavaradhya, N. | : Raghavanka, Harichandra Kavya, Bangalore, 1955. |
| Bellave Venkatanarayanappa (Ed.) | : Pampa,Vikramarjuna Vijayam, Bangalore, 1931. Also (ed.) Gangasuta, Dharwad, 1976. |
| Bilhana | : Vikramankadeva Charita with an Introduction by George Buhler, Bombay, 1975. |
| Chakravarti, R. | : Santale, the queen of Vishnuvardhana |
| Coelho William | : The Hoysala Vamsa, Bombay, 1950. |
| Dikshit, G.S. | : Okkalu, a Corporate body of Mediaeval Karnataka. |
| Do. | : Local Self Government in Mediaeval Karnataka, Dharwar, |
| Derrett, J.D.M. | : The Hoysala, Oxfor, 1956. |
| Deveerappa, H. (Ed.) | : Nanjunda Kavi, Ramanatha Charita, Mysore, 1964. |
| Deveerappa, H. and Padmanabha Sharma (Ed.) | : Janna, Anantanathapurana, Mysore, 1972. |
| Diwarkar, R.R. (Ed.) | : Karnataka Through the Ages, Bangalore, 1965. |

Gharpure, J.R. : Devannabhatta, Smrithi Chandrika, Vyavahara Khanda, Parts I-III- An English translation, Bombay, 1950.

Ramanuja Ayyangar, M.A. and Narasimhachar, S.G. (Ed.) : Ranna, Gadayuddha, Mysore 1925.

Rama Rao, R. : Religion under Vishnuvardhana, the Hoysala king.

Resesh, K.V. and Others (Ed.) : Srikantika, Mysore, 1973.

Rice Lewis, B. : Mysore and Coorg from the Inscriptions, London, 1969.

Saletore, B.A. : Ancient Indian Political Thought and Institutions, Bombay, 1968.

Shama Sastri, K. (Trans.) : Kautilya Artha Sastra, Mysore, 1921.

Shamasastry, R. (Ed.) : Nayasena, Dharma Mrita, Mysore 192, 1926.

Shastry, Chandrashekar, S. : Economic Conditions under Hoysalas.

Shastry, Krishna. H. : Hoysalas in and beyond Mysore.

Seetharam, C.B. : Queen Santala Devi.

Sesha Ayyangar, H. (Ed.) : Chavundaraya, Lokopakaram, Madras, 1950.

Sheik Ali, B. (Ed.) : The Hoysala Dynasty, Mysore, 1972.

Do. : History of the Western Gangas of Talakad, Mysore, 1976.

Sircar, DlC. : Indian Epigraphy, Delhi, 1965.

Sitaramiah, M.V.(Ed.) : Sri Vijaya, Kaviraja Marga, Bangalore,

1968.

Srigondekar, G.K. (Ed.) : Somesvaradeva, Manasollasa Vols. 1-3, Baroda, 1925, 1939 and 1981.

Srikantayya, S. : Topography of Halebid

Srikantasastry, S. : Sources of Karnataka History, Vol. I, Mysore, 1940.

Shivanna, K.S. : A critique of Hoysala polity, Mysore, 1988

Venkannayya, T. (Ed.) : Harihara, Basavarajadevara Ragale, Mysore, 1951.

Venkataraman, K.R. : The hoysalas in the Tamil Country

Venkataramappa, K. and javare gowda, D. (Ed.) : Nemichandra, Lilavati Prabanda, Mysore, 1966.

Venkatara Rao, A. and Sesha Ayyangar, H. (Ed.) : Nagavarma, Abhidhanarathamala, Madras, 1940.

Do. : Ponna, Shantipuranam, Madras, 1929.

# ಹೊಯ್ಸಳರು


ಚಾಲುಕ್ಯರು
ಸೌರಾಷ್ಟ್ರರು
ಬ್ರೋಚ್
ನರ್ಮದಾ ನದಿ
ತಪತೀ ನದಿ
ಅಜಂತಾ
ನಾಸಿಕ್
ಎಲ್ಲೋರ
ಗೋದಾವರೀ ನದಿ
ಕಾಕತೀಯರು
ಓರಂಗಲ್
ಮಹಾನದಿ
ಭುವನೇಶ್ವರ
ಕಳಿಂಗ
ಕೃಷ್ಣಾ ನದಿ
ಪೂರ್ವ ಚಾಲುಕ್ಯರು
ಪಟ್ಟದಕಲ್ಲು
ಐಹೊಳೆ
ಬಾದಾಮಿ
ಗೋವ
ಬಂಕಾಪುರ
ಹೊಯ್ಸಳರು
ದೋರಸಮುದ್ರ
ಕಾಂಚಿ
ಮಧುರೆ
ಪಾಂಡ್ಯರು
ಅನುರಾಧಪುರ

## ಹೊಯ್ಸಳರ ವಂಶಾವಳಿ

- ಸಳ
  - ನೃಪಕಾಮ (ಸು. ಕ್ರಿ.ಶ. 1000 - 1045)
    - ವಿನಯಾದಿತ್ಯ (ಸು. ಕ್ರಿ.ಶ. 1045 - 1098)
      - ಎರೆಯಂಗ (ಸು. ಕ್ರಿ.ಶ. 1098 - 1100)
        - ಒಂದನೇ ಬಲ್ಲಾಳ (ಸು. 1100-1108)
        - ವಿಷ್ಣುವರ್ಧನ (ಸು. 1108-1142)
          - ಬಲ್ಲಾಳ ದೇವ
          - ಒಂದನೇ ನರಸಿಂಹ (1142 - 1173)
            - ಎರಡನೇ ಬಲ್ಲಾಳ (ವೀರ ಬಲ್ಲಾಳ) (1173 - 1220)
              - ಎರಡನೇ ನರಸಿಂಹ (1220 - 1235)
                - ಸೋಮೇಶ್ವರ (1235 - 1253)
                  - ಮೂರನೇ ನರಸಿಂಹ (ಸು. 1253 - 1292)
                    - ಮೂರನೇ ಬಲ್ಲಾಳ (1292 - 1343)
                      - ನಾಲ್ಕನೇ ವಿರುಪಾಕ್ಷ ಬಲ್ಲಾಳ (1343 - 1346)
                  - ರಾಮನಾಥ (ಸು. 1253 - 1295)
        - ಉದಯಾದಿತ್ಯ





King Vishnuvardhana in a Durbar Scene
With his chief queen
Shantala Devi.

